# ಮುಳ್ಳುಬೇಲಿ

## ಮಹಾಯುದ್ಧ (೧೯೧೪)

'ವ್ಯಾನ್' ಎಂಬ ನಡುಗಡ್ಡೆಯ ಪಶ್ಚಿಮಕ್ಕೂ, ಮೀನಕ್ಕಾಗಿ ಹೆಸರು ಹೊಂದಿದ 'ಪೀಲ್' ಎಂಬ ಪಟ್ಟಣದ ಮೂಲೆಗೂ ಆಗುವ 'ನಾಕಾಲೋಯ್' ಎಂಬ ಸಾಗುವಳಿಯಾದ ಭೂಮಿಯು ಇರುತ್ತದೆ. ಇಲ್ಲಿಯ ಒಕ್ಕಲಾದ ಮನೆಗಳ ಮುಂದೆ ನಿಂತರೆ, ಆ ಬಂದರವು ಎದ್ದು ಕಾಣುತ್ತದೆ. ಮೀನ ಹಿಡಿಯುವದಕ್ಕಾಗಿ ಹೋದ ಹಡಗಗಳು ಸಹ ಸಮುದ್ರದಲ್ಲಿ ಓಡಾಡುವದೂ ಸ್ಪಷ್ಟವಾಗಿ ಕಾಣುತ್ತವೆ. ಈ ಭೂಮಿಯ ಕೊನೆಯ ಭಾಗಕ್ಕೆ ಒಂದು ಸಣ್ಣ ಮರಡಿಯಿದ್ದುದರಿಂದ, ಅದೇ, ಭೂಮಿ ಹಾಗೂ ಸಮುದ್ರದ ಸೀಮೆಯ ಕಲ್ಲಾಗಿತ್ತು. ಈ ಮರಡಿಯ ತುಟ್ಟ ತುದಿಯಮೇಲೆ 'ಕಾರಿನ್ಸಫಾಲಿ' ಎಂದು ವಾಡಿಕೆಯಾಗಿ ಕರೆಯಲ್ಪಡುವ ಚಚ್ಚೌಕಾದ ಒಂದು ಗೋಪುರವಿರುತ್ತದೆ. ಈ ಗೋಪುರದ ಕೆಳಬದಿಗೆ ಕಲ್ಲಿನ ಗೋಡೆಯುಳ್ಳ ಒಂದು ಚಿಕ್ಕದಾದ ರುದ್ರಭೂಮಿಯಿದೆ.

ಸಮುದ್ರರಾಜನ ಗರ್ಜನೆಯು ಚಳಿಗಾಲದ ಹೊರತು ಕೇಳಿಸ ದಷ್ಟು ಈ ಭೂಪ್ರದೇಶವು ಒಳಬದಿಗಿದೆ; ಆದರೆ ಬೇಸಿಗೆಯಲ್ಲಿ ಮಾತ್ರ ಕ್ಷಾರಮಿಶ್ರಿತ ವಾಯುಲಹರಿಯು ಅಲ್ಲಿ ನೆಲೆಸಿದವರಿಗೆ ಅನಾಯಾಸ ದೊರೆಯುತ್ತಿತ್ತು. ಅಲ್ಲಲ್ಲಿ ದೊಡ್ಡ ದೊಡ್ಡ ಮರಗಳಿದ್ದುದರಿಂದ ಈ ಭೂಮಿಯು ಒಯಲುಬಯಲಾಗಿ ಕಾಣದೆ ಮನಸಿಗೆ ಆಹ್ಲಾದಕರ ವಾಗಿಯೂ ಕಾಣುತ್ತಿತ್ತು. ಶಾಂತವಾಗಿಯೂ ತೋರುತ್ತಿತ್ತು ಈ 'ನಾಕಾಲೋಯ್'

ಕಂದರದಲ್ಲಿ ಅಲ್ಲಿಯ ಒಕ್ಕಲುಮನೆಯು ಕಟ್ಟಲ್ಪಟ್ಟಿದೆ. ಸಮೀಪದಲ್ಲಿಯೇ ಇರುವ ಮರಡಿಯೇ ಅದಕ್ಕೆ ಬೆಂಗಾವಲಾಗಿ ನಿಂತಂತಿದೆ. ಗಟ್ಟಿಮುಟ್ಟಿಯಾಗಿ ಕಟ್ಟಿದ ಒಂದು ದೊಡ್ಡ ಮನೆ. ಅದರ ಸುತ್ತುಮುತ್ತಲಿಲ್ಲ ಚಿಕ್ಕಚಿಕ್ಕ ಮನೆಗಳು. ಅವುಗಳೂ ಸಹ ಭದ್ರವಾದ ಕಟ್ಟಡಗಳೇ ಆಗಿದ್ದುವು. ರಸ್ತೆಯಿಂದ ಈ ಮನೆಗಳಿಗೆ ಹೋಗಲು ಒಂದು ನೆಟ್ಟನ್ನ ದಾರಿಯು ಮಾಡಲ್ಪಟ್ಟಿತ್ತು. ಎರಡೂ ಬದಿಗಳಲ್ಲಿ ಚಿಕ್ಕಚಿಕ್ಕ ಗಿಡಗಳನ್ನು ಹಚ್ಚಿ ಬೇಲಿಯನ್ನಾಗಿ ಮಾಡಲಾಗಿತ್ತು.

ಇಲ್ಲಿ ನೆಲೆಸಿದವನು ಒಕ್ಕಲಿಗ 'ರಾಬರ್ಟ್‌ಕ್ರೈಅನ್'ನು. ಬಲು ಗಟ್ಟಿಗ ಮನುಷ್ಯನವನು. ಯಾವಾಗಲೂ ಒಂದು ಕುಡತಿಯನ್ನು ತೊಟ್ಟಿರುತ್ತಿದ್ದನು. ೩-೪ ತಲೆಗಳಿಂದ ಇವನ ವಂಶಜರು ಇಲ್ಲಿಯೇ ನೆಲೆಸುತ್ತ ಬಂದಿದ್ದರು. ಅವನಾದರೂ ಈ ಭೂಮಿಯನ್ನು ಉಳುವುದರಲ್ಲಿ ತನ್ನ ಜೀವಮಾನವನ್ನು ಕಳೆದವನು. ಆದರೆ ಪಾಪ! ಈಗ ಅವನು ಮುದುಕ. ತೀರ ಹಣ್ಣುಹಣ್ಣಾಗಿದ್ದುದರಿಂದ ಮನೆಯನ್ನು ಬಿಟ್ಟು ಎಲ್ಲಿಯೂ ಹೋಗಲಾರ. ರವಿವಾರಕ್ಕೊಮ್ಮೆ ನಿರ್ವಾಹವಿಲ್ಲದೆ ಹತ್ತಿರವಿದ್ದ ದೇವಾಲಯಕ್ಕೆ ಹೋಗಬೇಕಾಗುತ್ತಿತ್ತು. ಯಾಕಂದರೆ ಅವನು ವೇಲ್ಸ ಜನರಿಗೆ ಸ್ಥಳಿಕ ಧರ್ಮೋಪದೇಶಕನಾಗಿದ್ದನು. 'ನಾನೀಗ ಒಕ್ಕಲತನವನ್ನು ಸಾಗಿಸಲು ತಕ್ಕವನಲ್ಲ. ಬೋಧನೆಮಾಡುವದರಲ್ಲಿ ನನಗೆ ಈಗ ಹೆಚ್ಚು ಮಮತೆ' ಎಂದು ಅವನು ಇತ್ತೀಚೆ ಅನ್ನಹತ್ತಿದ್ದನು.

ಅವನ ಹೆಂಡತಿಯು ತೀರಿ ಹೋಗಿದ್ದಾಳೆ. ರೇಲ್ವೆ ಸ್ಟೇಶನ್ನಕ್ಕೆ ಹೊರಳುವ ದಾರಿಯಲ್ಲಿರುವ ಮಹಾದ್ವಾರದ ಹತ್ತಿರದ 'ಪ್ಯಾಟ್ರಿಕ್ ಕರ್ಕ್'ನಲ್ಲಿ ಅವಳ ಅಂತ್ಯವಿಧಿಯಾಗಿದೆ. ಅವನಿಗೆ ಒಂದು ಗಂಡು, ಒಂದು ಹೆಣ್ಣು ಹೀಗೆ ಇಬ್ಬರೇ ಮಕ್ಕಳು. 'ರಾಬಿ'ಯು ೨೬ ವರುಷದ ಹರೆಯದವನು. ನೋಡಲು ಸುಂದರ. ಹೊಳಪುಳ್ಳ ಕಣ್ಣುಗಳು. ರಸರಸಿತವಾದ ಮುಖದ ಮೇಲಿನ ಕಾಂತಿಯಿಂದಲೆ ಒಳ್ಳೇ ದೇಹಸಂಪತ್ತುಳ್ಳವನೆಂದು ಯಾರೂ ಹೇಳಬಹುದು. ಈಗ ಅವನು ತಂದೆಯ ಬಲಗೈಯಾಗಿದ್ದನು. ಮಗಳು 'ಮೋನಾ' ೨೩ ವರುಷ. ನಿಲುವು ಎತ್ತರವಾದುದು.

ಹುರಿಕಟ್ಟಾದ ಮೈ. ತುಂಬಿದ ವೃಕ್ಷಸ್ಥಲ. ಕಣ್ಣು ಮೂಗಿನ ಅಂದ ಚೆಂದವು ಅವಳ ಚೆಲುವಿಕೆಯನ್ನು ಒರ್ಣಿಸಲು ಹೊಗಳಬಟ್ಟಂಗಿಗಳಾಗಿದ್ದವು. ಅವಳ ಅಂಗಸೌಷ್ಠವವು ಸೌಂದರ್ಯದ ಕಣಿಯೆಂದು ಸಾರುತ್ತಲಿತ್ತು. ಅವಳ ತಾಯಿಯು ತೀರಿಕೊಂಡಂದಿನಿಂದ ಅವಳೇ ಮನೆಯಲ್ಲಿಯ ಹಿರಿಯ ಹೆಣ್ಣುಮಗಳಾಗಿದ್ದಳು. ಅಣ್ಣ, ತಂದೆಯರ ಯೋಗಕ್ಷೇಮವನ್ನು ಬಹು ಲಕ್ಷ್ಯಪೂರ್ವಕವಾಗಿ ನೋಡಿಕೊಳ್ಳುವದಲ್ಲದೆ, ಹೆಣ್ಣಾಳು, ಗಂಡಾಳು ಮೊದಲಾದ ಒಕ್ಕಲುತನದ ಕೆಲಸದ ವ್ಯವಸ್ಥೆಯನ್ನೂ ಮೈತುಂಬ ಕಣ್ಣಿದ್ದವರಂತೆ—ಅನುಭವಿಕ ಹೆಂಗಸರಂತೆ ನೋಡಿಕೊಳ್ಳುತ್ತಿದ್ದಳು.

ಮೋನಳಿಗೆ ಪ್ರೇಮಹೃದಯವೊಂದಿರಲಿಲ್ಲ; ಆದರೆ ಅವಳಿಗಾಗಿ ಅದೆಷ್ಟೋ ಜನರು ಹಂಬಲಿಸುವವರಿದ್ದಾರೆ. ಅವರಲ್ಲಿ ಮುಖ್ಯನೆಂದರೆ—ಈ ನೌಕಾಲೋಯ್‌ದ ಆಚೆಗಿರುವ 'ಬೋನೀ' ಫಾರ್ಮಿನ ಹಕ್ಕುದಾರನು. ಜನರು ಅವನಿಗೆ 'ಲಾಂಗ್ ಜಾನ್ ಕಾರ್ಲೇಟ್' ಎಂದು ಕರೆಯುತ್ತಾರೆ. ಇವನ ಪ್ರಣಯಚೇಷ್ಟೆಯು ಇವನ ಅಂದಗೇಡಿತನದಷ್ಟೇ ಅಸಹ್ಯಾಳವಾಗಿದ್ದಿತು.

'ಡೊಗ್ಲಾಸ' ಪಟ್ಟಣಕ್ಕೆ ಹಾಲು ಪೂರೈಸುವಷ್ಟು ಹಸುಗಳನ್ನು ನಾವಿಬ್ಬರೂ ಕೂಡಿಯೇ ಕಟ್ಟಿದರೆ ಒಳಿತಾಗದೆ? ಎಂದು ಅವನು ಅವಳನ್ನು ಕೇಳುವದು ವಾಡಿಕೆಯಾಗಿತ್ತು. ಇದರ ಇತ್ಯರ್ಥವನ್ನು ತಿಳಿದುಕೊಂಡು ಮೋನಳು ಅವನನ್ನು ತಿರಸ್ಕರಿಸುತ್ತಿದ್ದಳು; ದುರ್ಲಕ್ಷಿಸಿದ್ದಳು.

ಈ ನೌಕಾಲೋಯ್‌ದ ಭೂಮಿಯೆಲ್ಲವೂ ಸಾಗುವಳಿಯಾಗಿರಲಿಲ್ಲ. ಕೆಲವೊಂದು ಭಾಗವಷ್ಟೇ ಸಾಗುವಳಿಪಡಿಸಲ್ಪಟ್ಟಿತ್ತು. ಅಲ್ಲಿ ಓಟ್ಸ್ ಮತ್ತು ಗೋದಿಯ ಬೆಳೆಯು ಅಲ್ಪ ಪ್ರಮಾಣದಿಂದ ಬೆಳೆಯುವದು; ಆದರೆ ಇದು ಪೀಲ್ ಪಟ್ಟಣಕ್ಕೆ ಹಾಲು ಪೂರೈಸಲು ಕಟ್ಟಿದ ದನಗಳಿಗೆ ಕೇವಲ ಹುಲ್ಲುಗಾವಲವಾಗಿತ್ತು. ಆಳುಮಕ್ಕಳು ಆರುಗಂಟೆಗೆ ಹಿಂಡಿಕೊಳ್ಳುವರು. ದೊಡ್ಡ ದೊಡ್ಡ ಪಾತ್ರೆಗಳಲ್ಲಿ ಆ ಎಲ್ಲ ಹಾಲನ್ನು ತುಂಬಿ

ಗಾಡಿಯಲ್ಲಿರಿಸಿಕೊಂಡು, ಮೋನಳು ಪಟ್ಟಣಕ್ಕೆ ಏಳು ಗಂಟೆಗೆ ಹೊರಡುವಳು.

೧೯೧೧ನೇ ಇಸ್ವಿಯ ಅಗಸ್ಟ ತಿಂಗಳಿನ ಒಂದು ರವಿವಾರ ಮುಂಜಾವು. ಆದೇ ದಿನಕರನು ಹೊಂಬಣ್ಣರಂಜಿತನಾಗಿ ಉದಯಾಚಲದ ನೀಲಿ ಮೂಡುತ್ತಿದ್ದಾನೆ. ಮೋನಳು ಇನ್ನೂ ಹೊರಬಾಗಿಲನ್ನು ದಾಟಿರಲಿಲ್ಲ. ಜೀವರಕ್ಷಿಸುವ ದೋಣಿಗೆ ಸಂಬಂಧಪಟ್ಟ ಮನೆಯೊಳಗಿಂದ ಆಕಾಶಬಾಣದ ಸಪ್ಪಳದಂಥ ಸದ್ದು ಆವಳಿಗೆ ಕೇಳಿಸಿತು. ಸಮುದ್ರದ ಕಡೆಗೆ ಕಣ್ಣು ಹೇರಿದಳು. ಶಾಂತವಾಗಿ ನಿದ್ರಿಸುವ ಮಗುವಿನಂತೆ ಸಮುದ್ರವೂ ಆಲೆಗಳಿಲ್ಲದೆ ಶಾಂತವಾಗಿತ್ತು. ಕಣ್ಣುಕಾಂಬ ಆಳತೆಯೊಳಗೆ ಆವಳ ದೃಷ್ಟಿಗೆ ಒಂದಾನೊಂದು ಹಡಗವೂ ಬೀಳಲಿಲ್ಲ. ಹಾಗಾದರೆ ಇದೇನಿರಬಹುದು? ಎಂಬ ಶಂಕೆಗೆ ಉತ್ತರ ದೊರೆಯಲಿಲ್ಲ.

ಕಣಚಿಕಟ್ಟಿದ ಭಾಗದ ಕಡೆಯಲ್ಲಿದ್ದ ಹುಂಜವು ಕೂಗುತ್ತಲಿದೆ. ಗುಡ್ಡದ ಮಾರ್ಗದಲ್ಲಿರುವ ಕುರಿಗಳ ಮಧ್ಯದಲ್ಲಿ ರಾಖಿಯ ನಾಯಿಯು ಬೊಗಳುತ್ತಲಿದೆ. ಜೇನ್ನೊಣಗಳು ಆತ್ತ ಹೂದೋಟದಲ್ಲಿ ತಮ್ಮ ಸ್ವಚ್ಛಂದ ವೃತ್ತಿಯ ಗಾಯನಾಲಾಪವನ್ನು ಮಾಡುತ್ತಲಿವೆ. ನೀಲಿ ಬಣ್ಣದ ಗಗನಾಂಗಣದಲ್ಲಿ ಟಿಟ್ಟಿಭವು ಹಾಡುತ್ತ ಹಾರಾಡುತ್ತಲಿದೆ. ಪ್ರಶಾಂತವಾದ ಪ್ರಭಾತದಂತೆ ಈ ಸುಂದರ ಯುವತಿಯು ತನ್ನಷ್ಟಕ್ಕೆ ತಾನೆ ಏನೋ ಬಾಯಲ್ಲಿಯೇ ಗೊಣಗುಟ್ಟುತ್ತ ಗಾಡಿಯನ್ನು ಹೊಡೆಯುತ್ತ ಹೊರಟಿದ್ದಾಳೆ. ಗಾಡಿಯ ಗಾಲಿಗಳ ಸಪ್ಪಳದ ಹೊರತು ಬೇರೆ ಯಾವ ಸದ್ದೂ ಎಲ್ಲಿಯೂ ಕೇಳಬರುತ್ತಿದ್ದಿಲ್ಲ.

ಆವಳು ಪೀಲ್ ಪಟ್ಟಣವನ್ನು ಪ್ರವೇಶಿಸಿದಳು. ಕಾಯ್ದಿಟ್ಟ ನೌಕಾದಳದ ಜನರು ನೀಲಿಬಣ್ಣದ ಉಡುಪು ಧರಿಸಿಕೊಂಡು ಮನೆಗಳೊಳಗಿಂದ ಹೊರಬರುತ್ತಿರುವದನ್ನು ಕಂಡಳು. ತಮ್ಮ ತಮ್ಮ ಹೆಂಡಿರು-ಮಕ್ಕಳ ನಿರೋಪವನ್ನು ತೆಗೆದುಕೊಳ್ಳುವುದರ ಗಡಿಬಿಡಿಯು ಒಂದೇ ಸಮನೆ ಸಾಗಿತ್ತು. ಊರೊಳಗಿನ ಗಂಡಸರೆಲ್ಲರು ಸಜ್ಜಿತರಾಗಿ ಸ್ಟೇಶನ್ನಿನ

ಕಡೆಗೆ ಹೊರಟ ದೃಶ್ಯವು ಅವಳಿಗೆ ಗೋಚರವಾಯಿತು; ವಿಚಾರಮಗ್ನಳಾದಳು.

'ಏನಿದು? ಜನರು ಅದೇಕೆ ಹೀಗೆ ಹೊರಟಿದ್ದಾರೆ?' ಎಂದು ಮೋನಳು ಅದಾವುದೋ ಒಬ್ಬ ಹೆಣ್ಣುಮಗಳನ್ನು ಆಶ್ಚರ್ಯಚಕಿತಳಾಗಿ ವಿಚಾರಿಸಿದಳು. ಅದೇ ಆಗ ತನ್ನ ಪ್ರಿಯಕರನನ್ನು ಯುದ್ಧಕ್ಕೆ ಕಳಿಸಿ, ಸುಖದುಃಖಮಿಶ್ರಿತಭಾವನೆಯಿಂದ ಮನೆಯೊಳಗೆ ಹೋಗಲಾರದೆ ಅವಳು ನಿಂತಿದ್ದಳು.

'ಅಯ್ಯೋ, ಮಹಾರಾಯಳೇ, ಇನ್ನೂ ನೀನು ಕೇಳಿಯೇ ಇಲ್ಲವೇ? ಅದು ಯುದ್ಧ! ತಯಾರಿಯು ಇಂದಿನಿಂದಲೇ ಪ್ರಾರಂಭ. ನಾಲ್ಕು ಹಡಗಗಳು ಇಂದೇ ಈ ನಡುಗಡ್ಡೆಯ ಮುಖ್ಯ ಬಂದರವಾದ ಹೊಗ್ಲಾಸಕ್ಕೆ ಹೊರಡುವವು. ಅಲ್ಲಿಂದ ಜನರು ಬೇರೆ ಬೇರೆ ಕಡೆಗೆ ಯುದ್ಧಕ್ಕೆ ಹೋಗುವರು.'

'ಯುದ್ಧವೆ! ಯಾರೊಡನೆ?'

'ಜರ್ಮನಿ! ಇದೆಯಲ್ಲ ಗೊತ್ತಿಲ್ಲವೆ— ಆ ಜರ್ಮನಿ.'

ಬೆಲ್ಜಿಯಮ್ಮಿನ ಮೇಲೆ ಜರ್ಮನಿಯು–ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ. ಜರ್ಮನಿಗೆ ಬುದ್ಧಿಯನ್ನು ಕಲಿಸಬೇಕೆಂದು ಬೆಲ್ಜಿಯಮ್ಮಿನವರು ಹೋರಾಡದೆ ಬಿಡರು. ಯಥಾನುಶಕ್ತಿ ಕೈತೋರಿಸದೆ ಬಿಡರು.

'ಅಗತ್ಯವಾಗಿ. ಕೈತೋರಿಸದೆ ಅವರೇಕೆ ಬಿಟ್ಟಾರು!' ಎಂದು ಮೋನಳು ಗಟ್ಟಿಯಾಗಿಯೇ ನುಡಿದಳು.

ಅವರು ಜರ್ಮನ್ನರ ಹಲ್ಲು ಮುರಿಯುವಂತೆ ಒದೆತವನ್ನು ಕೊಡದಿರಲಾರರು. ಅಂದರೆ ಯುದ್ಧವು ಬೇಗನೆ ನಿಂತುಹೋಗುವದು. ಅವಳು ಮನಸಾರೆ ಜರ್ಮನಿಯವರನ್ನು ತಿರಸ್ಕರಿಸುತ್ತಿದ್ದಳು. ಅದೇಕೆಂಬುದು ಅವಳಿಗೂ ತಿಳಿಯದ ಮಾತು. ಈ ಸಲ ಅವರು ಮಾಡಿದುದಕ್ಕೆ ಮಣಿಯಂಥ ಕಡಬನ್ನು ತಿನ್ನದಿರಲಾರರು.

ಅವಳು ಮನೆಗೆ ತಿರುಗಿ ಬರುವಷ್ಟರಲ್ಲಿ ರಾಬಿಯ ಮುಖಚರ್ಯೆಯು ಬದಲಾಯಿಸಿರುದನ್ನು ಕಂಡುಹಿಡಿದಳು.

'ಅಂತೂ, ನೀನು ಆ ಸುದ್ದಿಯನ್ನು ಕೇಳಿರುವಿಯಷ್ಟೆ!'

'ಹೌದು, ಕೇಳಿದ್ದೇನೆ.'

'ಎಲ್ಲ ಹುಡುಗರನ್ನು ಇನ್ನು ಮುಂದೆ ಕರೆಯಿಸಿಕೊಳ್ಳುವರಂತೆ!'

'ನಿಜವಾಗಿಯೂ ಹೌದೆ? ತಂಗೀ, ನಿನಗೂ ಹಾಗೆನಿಸುತ್ತದೆಯೇ?'

'ಭಾವೀ ಪ್ರಜರಾದ ನಿಮ್ಮಂಥ ತರುಣರನ್ನು ಸರಕಾರವು ಎಂದಿಗಾದರೂ ಬಿಟ್ಟೀತೆ?' ಎಂದು ಮೋನಳು ನಕ್ಕಳು.

ರಾಬಿಯ ಕಪ್ಪು ಕಣ್ಣುಗಳು ಮಿನುಗಿದವು. ಮನೆಯ ಸುತ್ತುಮುತ್ತಲಿನ ಹೊಲಗಳ ಕಡೆಗೆ ನೋಡಿದನು. ಅವು ಹಳದಿಬಣ್ಣದವಾಗಿವೆ; ಸುಗ್ಗಿಯು ಇನ್ನೇನು ತಡವಾಗದು. ಆ ಮೇಲೆ. . . . .

೧೫ ದಿನಗಳು ಗತಿಸಿದವು. ನಡುಗಡ್ಡೆಯ ತುಂಬೆಲ್ಲ ಹಾಹಾಕಾರವೆದ್ದಿದೆ. **'ನಿಮ್ಮ ಅರಸನಿಗಾಗಿ, ನಿಮ್ಮ ಜನ್ಮಭೂಮಿಗಾಗಿ ನೀವೆಲ್ಲರೂ ಬರಬೇಕು.'** ಎಂದು ಸಾರ್ವತ್ರಿಕವಾಗಿ ಲಾರ್ಡ ಕಿಚನರನು ಡಂಗುರ ಸಾರಿದ್ದಾನೆ. ಪ್ರತಿಯೊಂದು ಮನೆಯ ಗೋಡೆಗಳಿಗೆ ಈ ರಾಜಾಜ್ಞೆಯನ್ನು ಅಂಟಿಸಿದ್ದಾರೆ. ಪ್ರತಿಯೊಂದು ಪತ್ರಿಕೆಯಲ್ಲಿಯೂ ದಪ್ಪಕ್ಕರಗಳಲ್ಲಿ ಮುದ್ರಿತವಾಗಿದೆ. ತೀರ ದೂರಿನ ಸ್ಥಳಗಳಿಂದಲೂ ತರುಣರು ನಾ ಮುಂದೆ, ನೀ ಮುಂದೆ ಎಂಬ ಉತ್ಸಾಹದಿಂದ ಸೈನ್ಯಭರತಿಯ ನಿಲ್ದಾಣಕ್ಕೆ ನುಗ್ಗುತ್ತಲಿದ್ದಾರೆ. ಇತ್ತ ಮೋನಳು ಮತ್ತು ರಾಬಿಯು ತಮ್ಮ ಸುಗ್ಗಿಯನ್ನು ಒಕ್ಕುವದರಲ್ಲಿ ಮಗ್ನರಾಗಲಿದ್ದಾರೆ. ಮೋನಳು ಮಾತ್ರ ತನ್ನ ಉಕ್ಕೇರಿ ಬರುತ್ತಿರುವ ಮನಸಿನ ಹುರಹುರಿಯನ್ನು ಹತ್ತಿಡಲಾರದೆ ಹೋದಳು.

'ಅಯ್ಯೋ! ನಾನೂ ಗಂಡಸೇಕೆ ಆಗಲಿಲ್ಲ?'

'ತಂಗೀ, ನೀನೂ ಯುದ್ಧಕ್ಕೆ ಹೋಗಲಿಚ್ಛಿಸುವಿಯಾ?'

'ಹೋಗದೇನು ಮಾಡಲಿ?' ಎಂದೆನ್ನುತ್ತ ಮೋನಳು ತಲೆಯನ್ನು ಅಲ್ಲಾಡಿಸುತ್ತ ಮರುಮಾತನಾಡಿದಳು.

ಬೆಳೆಯನ್ನು ಕೊಯ್ದು ಗೂಡು ಹಾಕಿದರು; ಹೊಲದಲ್ಲಿಯ ಕೆಲಸವೆಲ್ಲವೂ ತೀರಿತು. ಬಣಿವೆಯನ್ನೊಟ್ಟುವದು ಮಾತ್ರ ಉಳಿದಿತ್ತು. ಸಂಜೆಯ

ವಿಹಾರಕ್ಕೆಂದು ರಾಬಿಯು ಪಟ್ಟಣಕ್ಕೆ ಹೋಗಿದ್ದನು. ತಂದೆ-ಮಗಳಿಬ್ಬರೆ ಮನೆಯೊಳಗೆ ಉಳಿದಿದ್ದಾರೆ. ಮುದುಕನು ಮಾತ್ರ ಅದೇಕೋ ಏನೋ ಗಂಭೀರ ಮುಖಚರ್ಯೆಯುವನಾಗಿದ್ದಾನೆ. ಕ್ರೀಮಿಯನ್ ಯುದ್ಧವೂ, ಅದರ ಪರಿಣಾಮವೂ ಅವನ ಮನಸಿನ ಮುಂದೆ ಸುಳಿದಾಡಹತ್ತಿರಬಹು ದೆಂದು ಕಲ್ಪಿಸಬಹುದಾಗಿದೆ.

'ರಾಬಿಯು ಇತ್ತೀಚೆ ಬಲು ಚಂಚಲನಾಗಿದ್ದಾನೆ' ಎಂದು ತಂದೆಯು ನುಡಿದನು.

'ಇದೇನಾಶ್ಚರ್ಯ' ವೆಂದು ಮೋನಳೆಂದಳು.

ಈ ಸಮಯಕ್ಕೆ ಸರಿಯಾಗಿ ರಾಬಿಯು ಒಮ್ಮೆಲೆ ಬಿರುಗಾಳಿಯಂತೆ ಮನೆಯೊಳಕ್ಕೆ ನುಗ್ಗಿದನು.

'ತಂದೆಯೇ, ನಾನೂ ಯುದ್ಧದಲ್ಲಿ ಸೇರಿಕೊಂಡೆನು. ಮೋನಾ ನಾನೂ ಬಿಡಲಿಲ್ಲ ನೋಡು!' ಎಂದು ರಾಬಿಯು ಬಲ್ಲೇ ಉತ್ಸಾಹದಿಂದ ಹೇಳಿದನು.

ಮೋನಳು ತನ್ನ ಎರಡೂ ಕೈಗಳಿಂದ ಅವನ ಕೊರಳಿಗೆ ಅಪ್ಪಿಬಿಟ್ಟು ಹಾಕಿದವಳೆ, ಅವನಿಗೊಂದು ಮುದ್ದು ಕೊಟ್ಟಳು. ಮುದುಕನು ಏನೇನೋ ಬಾಯಲ್ಲಿ ಬಟಗುಟ್ಟಿ, ಮಲಗಿಕೊಳ್ಳಲು ಅಟ್ಟವನ್ನೇರಿ ಹೋದನು.

ಕೆಲವೊಂದು ದಿನಗಳು ಸಂದಮೇಲೆ, ರಾಬಿಯು ಹೊರಡುವ ದಿವಸ ಸಂಜೆ. ರಾಬಿಯು ಹೊರತಾಗಿ ಮನೆಯವರೆಲ್ಲರೂ ಚಹಾಪಾನ ಕ್ಕಾಗಿ ಕುಳಿತಿದ್ದಾರೆ. ಉದ್ದವಾದ ಮೇಜಿನ ಒಂದು ತುದಿಗೆ ಮುದು ಕನು, ಇನ್ನೊಂದು ತುದಿಗೆ ಆಳುಗಳು ಕುಳಿತಿದ್ದಾರೆ. ಮಾಂಕ್ಸಗಳ ನಡಾ ವಳಿಯಂತೆ ಮೋನಳು ಊಣಬಡಿಸಹತ್ತಿದ್ದಾಳೆ. ರಾಬಿಯು ಖಾಕಿಯ ಉಡುಪನ್ನು ಧರಿಸಿಕೊಂಡು ಕುಣಿಯುತ್ತ, ಬ್ಯಾಂಡಿನ ಧಾಟಿಯ ಸಿಳ್ಳನ್ನು ಹಾಕುತ್ತ ಅಟ್ಟದಿಂದ ಕೆಳಗಿಳಿದು ಬರತೊಡಗಿದ್ದಾನೆ. ತನ್ನ ಅಣ್ಣನು ಇಷ್ಟು ಸುಂದರನಾಗಿ ಕಂಡುದನ್ನು ಮೋನಳು ಇದುವರೆಗೆಂದೂ ಕಂಡಿರ ಲಿಲ್ಲ; ಎವೆ ಪಿಳುಕಿಸದೆ ಅವನನ್ನೆ ನೋಡುತ್ತಲಿದ್ದಾಳೆ.

'ಯುದ್ಧಕ್ಕೆ ಹೋಗಿ ಬರುವೆನು ತಂದೆಯೇ, ತಂಗಿಯೇ, ನನ್ನ

ಪ್ರಿಯ ಜನರೇ' ಎಂದು ಧೈರ್ಯದಿಂದ ಹೇಳಿದನನೆ, ದಾರಿಯನ್ನೇ ಹಿಡಿದನು. ಅವನ ಮೈಯು ರಣೋತ್ಸಾಹದಿಂದ ತುಂಬಿ ತುಳುಕಾಡುತ್ತಿತ್ತು.

ಅಣ್ಣನ ಕೈಯಲ್ಲಿ ಕೈಹಾಕಿ ಮೋನಳು ಅವನನ್ನು ಹುರಿದುಂಬಿಸುತ್ತ, ದೊಡ್ಡ ದೊಡ್ಡ ಹೆಜ್ಜೆಗಳನ್ನಿಕ್ಕುತ್ತ, ಮಹಾದ್ವಾರದವರೆಗೆ ಕಳುಹಬಂದಳು. ನೀನು ಎಷ್ಟೆಷ್ಟು ಹೆಚ್ಚು ಜರ್ಮನ್ನರನ್ನು ಕೊಲ್ಲುವಿಯೋ ಅಷ್ಟಷ್ಟು ಹೆಚ್ಚು ತನಗೆ ಆನಂದವಾಗುವದೆಂದು ರಾಬಿಯು ಮುಂದೆ ಹೇಳುತ್ತ ಸಾಗಿದ್ದಳು. ಜರ್ಮನ್ನರು ಕೆಟ್ಟ ಜನರು ! ಕುಹಕರು ! ಅಯ್ಯೋ ಅವಳೂ ಹೋಗಿದ್ದರೆ ಸಿರ್–ಜರ್ಮನಿ ಮಾಡುತ್ತಿದ್ದಳೋ ಏನೋ! ಯಾರು ಬಲ್ಲರು.

ರಾಜಬೀದಿಯೆಲ್ಲ ಉತ್ಸಾಹಿತ ಜನರ ಕೇಕೆಯಿಂದ ನಿನದಿಸುತ್ತಿದೆ. 'ಟಿಪ್ಪರರಿ' ಎಂಬ ಗೀತವನ್ನು ಹಾಡುತ್ತ, ಸುತ್ತುಮುತ್ತಲಿನ ಹಳ್ಳಿಗಳಿಂದ ಖಾಕಿ ಅಂಗಿಗಳನ್ನು ತೊಟ್ಟ ನವಯುವಕರು ತಂಡೋಪತಂಡವಾಗಿ ಗುಂಪುಗೂಡಿ ಹೊರಟಿದ್ದಾರೆ. ಅವರ ಮುಖಗಳ ಮೇಲೆ ಯುದ್ಧದ ಉತ್ಸಾಹ, ಆನಂದವು ಒಡೆದು ಕಾಣುತ್ತಿತ್ತು.

ರಾಬಿಯೂ ಆ ಗುಂಪಿನಲ್ಲಿ ಸೇರಿದನು. 'ಕರ್ಕಪ್ಯಾಟ್ರಿಕ್ಕ'ದ ಮೂಲೆಯನ್ನು ದಾಟುವವರೆಗೆ, ಮೋನಳು ನಿಂತಲ್ಲಿಯೆ ನಿಂತುಕೊಂಡು ಅಣ್ಣನನ್ನು ಒಂದೇಸವನೆ ನೋಡುತ್ತಿದ್ದಳು. ಅವನು ಮುಂದೆ ಮುಂದೆ ಸಾಗಿದಂತೆ ಗಿಡಗಳು ಅವನನ್ನು ಮರೆಯಾಗಿಸಿಬಿಟ್ಟವು. ಆಮೇಲೆ ಅವಳು ತೀರ ಮೆಲ್ಲದಿಯಿಡುತ್ತ ಮನೆಯ ಕಡೆಗೆ ಹೊರಳಿದಳು.

'ದೇವರ ದಾರಿಯು ಸಮುದ್ರದ ಮೇಲಿದೆ; ಆ ದಾರಿಯು ಬಹು ಆಳವಾದುದು. ಮಾನವರ ಶಕ್ತಿಗೆ ಸಿಲುಕದ ಮಾತು ಅದು' ಎಂದು ಗುಣಗುಡುತ್ತ ಮುದುಕನು ಭಾರವಾದ ಮನಸಿನಿಂದ ಮಲಗುವ ಕೋಣೆಯೊಳಗೆ ಹೋದನು.

ಎರಡು ತಿಂಗಳು ಕಳೆದುವು. ಮೋನಳು ಒಕ್ಕಲತನವನ್ನು ಬಹು ದಕ್ಷತೆಯಿಂದ ಸಾಗಿಸಿದ್ದರಿಂದ, ಎಲ್ಲವೂ ಸುಸೂತ್ರವಾಗಿ

ಸಾಗಿತ್ತು. ವಾರಕ್ಕೊಂದು ಸಲ ಮಾತ್ರ ರಾಬಿಯಿಂದ ಪತ್ರವು ತಪ್ಪದೆ ಬರುತ್ತಲಿದೆ. ಅವನ ಮೊದಲಿನ ಪತ್ರಗಳು ಉತ್ಸಾಹಿತವಾಗಿಯೂ, ಜಯೋತ್ಸವಗಾನ ಮಾಡುವಂಥವೂ ಇರುತ್ತಿದ್ದವು. ಯುದ್ಧವು ಒಂದು ಹಳೆಯ ಚಿನ್ನಾಟವು. ದೊಡ್ಡದೊಂದು ಸಾಹಸ ಕಾರ್ಯವು. ರಾಬಿಯು ರಣಾಂಗಣದ ಮುಂಭಾಗಕ್ಕೆ ಬೇಗನೆ ಕಳಿಸಲ್ಪಡತಕ್ಕವನು. ಬರಬರುತ್ತ ಅವನಿಂದ ಉದ್ದವಾದ ಪತ್ರಗಳು—ಬಲು ಗಂಭೀರವಾದುವು—ಬರತೊಡ ಗಿದವು. ಅವನ ಬಗ್ಗೆ ಅಷ್ಟೊಂದು ಕಾಳಜಿಮಾಡುವ ಕಾರಣವಿರಲಿಲ್ಲ. ಅವನು ಚೆನ್ನಾಗಿಯೇ ಇದ್ದಾನೆ. ಇವರು ಆ ನೀಚ ವೈರಿಗಳನ್ನು ಅಲ್ಪಾವಕಾಶದಲ್ಲಿಯೇ ನುಂಗಿ ನೀರು ಕುಡಿದು, ಕ್ರಿಸ್‌ಮಸ್ ಬರುವದ ರೊಳಗಾಗಿ ಮರಳಿ ಬರಬಹುದೆಂದು ಕಾಯಾಸಕಟ್ಟಲಾಗಿದೆ.

ಪ್ರತಿದಿನ ರಾತ್ರಿ ಊಟವಾದೊಡನೆ, ಬೈಬಲೊಂದನ್ನು ಬಿಟ್ಟು ಬೇರೆ ಯಾವುದನ್ನೂ ಎಂದೂ ಓದದ ಮುದುಕನು ಒಲೆಯ ಬದಿಯಲ್ಲಿ ಕುಳಿತು, ತನ್ನ ಪರಿಚಾರಕರ ಮುಂದೆ ಈಗ ವರ್ತಮಾನಪತ್ರಗಳನ್ನು ಓದಿ ಹೇಳುವುದರಲ್ಲಿ ಮಗ್ನನಾಗುತ್ತಿದ್ದಾನೆ. ಯುದ್ಧದ ಸುದ್ದಿಯು ಹೊರತು ಇನ್ನಾವುದೂ ಇರುತ್ತಿರಲಿಲ್ಲ. ಬೆಲ್ಜಿಯಮ್ಮಿನಲ್ಲಿ ಜರ್ಮನ್ನರು ಮಾಡಿದ ಹೃದಯದ್ರಾವಕ ಹಾವಳಿಗಳ ಸುದ್ದಿಯು ತಪ್ಪದೆ ಬರುತ್ತಿತ್ತು. ಮೋನನ ಸಿಟ್ಟು ತಲೆಗೇರಿ ಬಿಟ್ಟಿತು. ದೇವರು ಯಾಕೆ ಈ ಪಶುಜಾತಿಯ ಜರ್ಮನ್ನರನ್ನು ಬೇಟೆಯಾಡಿ ಜಗತ್ತಿನೊಳಗಿಂದ ಸಮೂಲನಾಶಪಡಿಸ ಬಾರದು? ಇವಳೇ ದೇವರು ಆಗಿದ್ದರೆ ಅವಕಾಶವೆಷ್ಟು ಹಿಡಿಯುತ್ತಿ ದ್ದಿಲ್ಲವೇನೋ ಯಾರಿಗೆ ಗೊತ್ತು! ಮುದುಕನು ಮಾತ್ರ ಯುದ್ಧದ ವಿಷಯಕ್ಕೆ ಏನೂ ಮಾತನಾಡುತ್ತಿರಲಿಲ್ಲ.

ದೇವರ ಪ್ರಾರ್ಥನೆಗಳನ್ನೋದುವ ಸಮಯ ಬಂದರೆ ಮುದು ಕನು ಓದಲು ಮನಬಾರದ್ದರಿಂದ ಮುಲುಗಲು ನುಸುಳುತ್ತಿದ್ದನು. ದೇವರ ದಾರಿಯು ಕತ್ತಲು ಕತ್ತಲಾದುದು. ಅದರರ್ಥವೇನಿರಬಹುದೆಂದು ಯಾರು ಹೇಳಬಲ್ಲರು?

ಚಳಿಗಾಲದ ರಾತ್ರಿಯು ದೊಡ್ಡದು. ಬೇಗನೆ ಬೆಳಗಾಗುವದಿಲ್ಲೆಂದು

ಜೇಸತ್ತು ಮುದುಕನು ವರ್ತಮಾನ ಪತ್ರಗಳನ್ನು ಓದಹತ್ತುವನು. ಲಂಡನ್ನ ಪಟ್ಟಣವಲ್ಲಾದ ಎದೆ ಬಿರಿಯುವಂಥ ಕ್ರೂರ ಕೃತ್ಯದ ಸುದ್ದಿಯು ಅವನನ್ನು ತಲ್ಲಣಗೊಳಿಸಿತು. ಇಂಗ್ಲಿಷ ಜನರು ಯಾವ ಜರ್ಮನ್ನರನ್ನು ಈ ವರೆಗೆ ನಂಬಿಗೆಯುಳ್ಳ ಸ್ನೇಹಿತರೆಂದು ಭಾವಿಸಿದ್ದರೋ ಅಂಥವರೆ ಈಗ ವಂಚಕರಾಗಿ ಬಿಟ್ಟಿದ್ದಾರೆ. ಝೆಪ್ಲಿನ್ನದ ದಾಳಿಯು ಲಂಡನ್ನ ಪಟ್ಟಣದ ಮೇಲಾಯ್ತು. ಜೀವ ಹತ್ಯಾಕಾಂಡವಾಗದಿದ್ದರೂ, ಜರ್ಮನ್ನರು ಹೇಳಿಕೇಳಿ ಎಚ್ಚರಿಕೆಯನ್ನು ಕೊಡಹತ್ತಿದ್ದಾರೆಂಬ ಮಾತು ಬಲು ಸ್ಪಷ್ಟವಾಗಿ ಕಾಣಹತ್ತಿದೆ.

'ಸರಕಾರದವರು ಈ ದೇಶದೊಳಗಿನ ಎಲ್ಲ ಜರ್ಮನ್ನರನ್ನು ಹಿಡಿದು ಹಾಕಿ ತುರಂಗದಲ್ಲಿ ಯಾಕೆ ತಬಾರದು? ಪ್ರತಿಯೊಂದು ಆ ಪಿಳ್ಳೆಯೂ ಹಾಗೆಯೇ. ಕುತ್ತಿಗೆಗ್ಗೊಯ್ಯಕರು! ಕೊಲೆಗಡಿಕರು! ವಿಶ್ವಾಸಘಾತಕಿಗಳು!' ಎಂದು ಮೋನಳು ಉದ್ಗಾರ ತೆಗೆಯುತ್ತಲೇ ಇದ್ದಳು.

ಬೈಬಲ್ಲನ್ನು ಓದಬೇಕೆಂದು ಮುದುಕನು ಪುಸ್ತಕವನ್ನು ತೆಗೆದನು ಓದಲಾಗದೆ ಮುಚ್ಚಿ ಅಟ್ಟಕ್ಕೇರಿದನು.

'ತಂಗೀ, ನೀನು ಬಲು ಕಲ್ಲೆದೆಯವಳು, ಕಟುಕಳು' ಎಂದು ಅವನಂದನು. ಅವಳಿಗದು ಸ್ಪಷ್ಟವಾಗಿ ಕೇಳಬರಲಿಲ್ಲ.

---

# ವೀರಸ್ವರ್ಗ

ಕ್ರಿಸಮಸ್ ಬಂತು, ಮುಗಿದೂ ಬಿಟ್ಟಿತು. ವಸಂತವು ಕಾಲು ಚಾಚಿದೆ; ಬೀಜಗಳನ್ನು ಬಿತ್ತಿದ್ದಾರೆ. ಚಳಿಗಾಲದ ತುರಂಗವಾಸದಿಂದ ಬಿಡುಗಡೆ ಹೊಂದಿದ ದನಕರುಗಳೆಲ್ಲ ಗುಡ್ಡದಲ್ಲಿ ಮೇಯಲು ಹೊರಗೆ ಹೋಗಿವೆ; ಆದರೆ ಯುದ್ಧವು ಮಾತ್ರ ಎಡೆಬಿಡದೆ ಸಾಗಿದೆ. ರಾಬಿಯು ಇನ್ನೂ ಮರಳಿ ಮನೆಗೆ ಬಂದಿಲ್ಲ.

ವಸಂತಕಾಲದ ಒಂದು ಮುಂಜಾವು. ಮೋನಳು ಗಾಡಿಯಲ್ಲಿ ಕುಳಿತುಕೊಂಡು ಪೀಲ್‌ಪಟ್ಟಣದಿಂದ ಮನೆಗೆ ಬರಹತ್ತಿದ್ದಾಳೆ. ತನ್ನ

ತಂದೆಯು ಅದಾರೋ ಮೂವರು ಸಭ್ಯಗೃಹಸ್ಥರೊಡನೆ ಹೊಲದ ತುಂಬ ಅಲೆದಾಡುವದು ದೂರದಿಂದಲೆ ಅವಳ ಕಣ್ಣಿಗೆ ಬಿದ್ದಿತು. ಒಬ್ಬನು ಮುಖ್ಯಾಧಿಕಾರಿಯ ಉಡುಪು ತೊಟ್ಟಿದ್ದನು. ಉಳಿದಿಬ್ಬರು ಸಾದಾ ಉಡುಪಿನಲ್ಲಿ; ತಲೆಗೆ ಮಾತ್ರ ರೇಶಿಮೆಯ ಟೊಪ್ಪಿಗೆ.

ಅವಳು ಮನೆಗೆ ಹೊರಳುವ ದಾರಿಗೆ ಬರುವಷ್ಟರಲ್ಲಿ ಗುಡ್ಡದ ಬದಿಯಿಂದ ನಾಲ್ಕನೆಯವನೊಬ್ಬನು ಇಳಿದು ಬಂದು ಅವರೊಳಗೆ ಸೇರಿದುದು ಮೋನಳ ಕಣ್ಣಿಗೆ ಬಿತ್ತು. ಅವನ ಮೈಯಲ್ಲಿ ಜಾಕೀಟು, ಕೈಯಲ್ಲಿ ಒಂದು ಬಂದೂಕು. ಜೊತೆಗೆ ೩-೪ ಬೇಟೆಯ ನಾಯಿಗಳು. ನಾಲ್ಕನೆಯವನು ಯಾರೆಂಬುದನ್ನು ಅವಳು ಕೂಡಲೆ ಗುರುತಿಸಿ, ಅವನು ತಮ್ಮ ಹೊಲದ ಒಡೆಯನೆಂದು ಕಂಡುಹಿಡಿದಳು. ಮುಂದೆ ಸಾವಕಾಶವಾಗಿ ಗಾಡಿಯನ್ನು ಹೊಡೆದುಕೊಂಡು ಬರುತ್ತಿರುವಾಗ ತನ್ನ ತಂದೆಯು ಹೊಲದ ಯಜಮಾನನೊಡನೆ ಮಾತನಾಡುವದು ಕೇಳಿಸಿತು:

'ಆದರೆ-ಯುದ್ಧವು ಮುಗಿದ ಮೇಲೆ, ಈ ಹೊಲದ ಗತಿಯೇನು, ಯಜಮಾನರೇ?'

'ಅದಕ್ಕಾಗಿ ಈಗ ಚಿಂತಿಸುವ ಕಾರಣವಿಲ್ಲ. ಇದೀ ಆಯುಷ್ಯವೆಲ್ಲ ನೀನು, ನಿನ್ನ ಮಕ್ಕಳು-ಮರಿಗಳು ಸಹಿತ ಇಲ್ಲಿಯೇ ಇರುವಿಯಂತೆ' ಎಂದು ಹೊಲದ ಯಜಮಾನನು ಉತ್ತರವಿತ್ತನು.

ಮೋನಳು ಕುದುರೆಯನ್ನು ಅದರ ಸ್ಥಳದಲ್ಲಿ ಕಟ್ಟಿಹಾಕಿ ಮನೆಯೊಳಹೊಕ್ಕಳು. ಆ ಸಭ್ಯಗೃಹಸ್ಥರೆಲ್ಲರೂ ಹೋದಮೇಲೆ, ಅವಳ ತಂದೆಯು ಆಕೆಯ ಹತ್ತಿರ ಬಂದನು. ಯಾವ ಮಾತುಕತೆಗಳಾದವೆಂಬುದನ್ನು ಮುದುಕನು ತೀಕುತ್ತ ಅವಳ ಮುಂದೆ ಒಂದೂ ಬಿಡದಂತೆ ಹೇಳಿದನು. ಆಗಲೆ ಬಂದ ಆ ನಾಲ್ವರಲ್ಲಿ ಒಬ್ಬನು ಈ ನಡುಗಡ್ಡೆಯ ಗವರ್ನರನು; ಉಳಿದಿಬ್ಬರು ಹೋಮ್ ಆಫೀಸಿನಲ್ಲಿರತಕ್ಕ ದೊಡ್ಡ ಅಧಿಕಾರಿಗಳು.

'ಮಗಳೇ, ನಿನ್ನ ಆ ಅಭಿಪ್ರಾಯದಂತೆಯೇ ಲಂಡನ್ನದಲ್ಲಿರುವ ಸರಕಾರವು ಅಭಿಪ್ರಾಯಪಟ್ಟಂತೆ ಕಾಣುತ್ತದೆ' ಎಂದು ತಂದೆಯು ಹೇಳಿದನು.

'ಅದೇನು?' ಎಂದು ಮೋನಳು ವಿಚಾರಿಸಿದಳು.

'ಈ ದೇಶದಲ್ಲಿರುವ ಎಲ್ಲ ಜರ್ಮನ್ನರನ್ನು ಬಂಧಿಸುವದು.'

'ಬಾಧಿಸುವದೆ? ಹಾಗೆಂದರೇನು?'

'ಹಾವಳಿಯನ್ನು ಹಾಕದಂತೆ ಒತ್ತಟ್ಟಿಗೆ ಅವರೆಲ್ಲರನ್ನು ತಂದು ಹಾಕುವದು.'

'ತುರಂಗದಲ್ಲಿಟ್ಟಂತೆಯೋ!'

'ಹೌದು, ಹಾಗೆಯೇ.'

'ಒಳಿತಾಯಿತು. ನೀಚರು! ವಂಚಕರು! ಆಂದರೆ ಅವರಿಗೆ ಬುದ್ಧಿ ಬರುವದು. ಆದರೆ ಆ ಗೃಹಸ್ಥರೇಕೆ ಇಲ್ಲಿಗೆ ಬಂದಿದ್ದರು?'

'ಗವ್ಹರ್ನರನು ಅವರನ್ನು ಕರೆತಂದಿದ್ದನು. ಈ ನಾಕಾಲೋಯ್ ಪ್ರದೇಶವೇ ಅವರನ್ನು ಬಂಧಿಸಿಡಲು ಯೋಗ್ಯ ಸ್ಥಳವೆಂದು ಅವನಿಗೆ ಕಂಡುಬಂದಿದೆ.'

ಮೋನಳು ಇದನ್ನು ಕೇಳಿ ಬೆಪ್ಪಾದಳು.

'ಏನು? ಆ ನರಪಶುಗಳು ಇಲ್ಲಿಗೆ ಬಂದ ಮೇಲೆ ನಾವು ಇಲ್ಲಿಂದ ಕಾಲ್ದೆಗೆಯಬೇಕಾಗುವದೋ?'

'ಹಾಗೇನೂ ಇಲ್ಲ' ಎಂದು ಮುದುಕನು ಹೇಳುತ್ತ ಮಾತನ್ನು ಮುಂದುವರಿಸಿದನು. ತಾನೂ, ತನ್ನ ಪರಿವಾರವೂ ಇಲ್ಲಿಯೇ ಇದ್ದು ಕೊಂಡು, ತೀರ ಗುತ್ತದ ಬದಿಗಿರುವ ಹುಲ್ಲುಗಾವಲವನ್ನಷ್ಟೇ ತನ್ನ ಕೈಯಲ್ಲಿರಿಸಿಕೊಳ್ಳಬೇಕು; ಮತ್ತು ಬಂಧಿತ ಜನರಿಗೆ ಬಳ್ಳೇ ಹಾಲನ್ನು ಪೂರೈಸಿಕೊಡಬೇಕೆಂಬ ನಿರ್ಣಯವಾಗಿದೆಯೆಂದು ಅವಳಿಗೆ ಹೇಳಿದನು.

ಮೋನಳು ಬಲು ಕ್ರುದ್ಧಳಾದಳು.

'ಫ್ರಾನ್ಸದಲ್ಲಿ ನಮ್ಮ ಹುಡುಗರನ್ನು ಕೊಲ್ಲುವಂಥ ರಕ್ಕಸರ ರಕ್ತ ದವರಿಗೆ ನಾವು ಹಾಲುಣಿಸಿ, ಅವರನ್ನು ಜೋಪಾನ ಮಾಡುವದಕ್ಕೆ ಇಲ್ಲಿರಬೇಕೆಂಬ ಅಭಿಪ್ರಾಯವೋ ಹೇಗೆ? ಎಂದಿಗೂ ಆಗದ ಮಾತು! ಇಂಥವನ್ನು ಮಾಡುವದು ಈ ಜನ್ಮದಲ್ಲಿ ಸಾಧ್ಯವಿಲ್ಲ' ಎಂದಾಡಿದಳು.

ಆವಳ ತಂದೆಯು ಇದನ್ನು ನಿರಾಕರಿಸಲೇಬೇಕು. ಬೇರೆ ಉಪಾ

ಯುವೇ ಇಲ್ಲ. ಏನೇ ಆದರೂ ಲಾವಣಿ ಹಿಡಿದ ಅವಧಿಯು ಮುಗಿಯುವ ವರೆಗೆ ಆ ಹೊಲವು ಇವರದೆಯಲ್ಲವೆ?

'ಈ ದ್ರೋಹಿಗಳನ್ನು ಇನ್ನೆಲ್ಲಿಯಾದರೂ ಒಯ್ದಿಡಲು ಬೇರೆ ಸ್ಥಳವನ್ನು ನೋಡಿಕೊಳ್ಳಬೇಕೆಂದು ಗವ್ಹರ್ನರನಿಗೆ ಹೇಳಬೇಕು' ಎಂದು ಮೋನಳು ಗದ್ದರಿಸಿದಳು.

'ಹಾಗೆ ಹೇಳುವದು ತನ್ನ ಕೈಯೊಳಗಿನ ಮಾತಲ್ಲ. ಯುದ್ಧದ ಕಾಲಕ್ಕೆ ಸರಕಾರವು ಏನನ್ನುಬೇಡುವದೋ ಅದೆಲ್ಲವನ್ನೂ ಪ್ರಜರು ತೆತ್ತಲೇಬೇಕು. ಅದು ಅವರ ಕರ್ತವ್ಯ' ಎಂದು ಅವಳಿಗೆ ಸಮಾಧಾನದಿಂದ ತಿಳುಹಿಸಿ ಹೇಳಿದನು.

'ಆಯಿತು. ಉಪಾಯವಿಲ್ಲ. ಅವರು ಹೊಲವನ್ನು ತೆಗೆದು ಕೊಳ್ಳಲಿ. ನಾವೇ ಇನ್ನೆಲ್ಲಿಗಾದರೂ ಹೊರಟುಹೋಗೋಣ. ಇಲ್ಲಿರು ವದು ಸರ್ವಥಾ ಬೇಡ.'

ಏನಾದರೂ ತಾನು ಇಲ್ಲಿರಲೇಬೇಕೆಂದು ಮುದುಕನು ಹೇಳಿದನು. ಕರ್ತವ್ಯಬದ್ಧನಾದುದನ್ನು ತಪ್ಪಿಸಲಾರನು.

'ಹಾಗಾದರೆ ನಾನು ಅವರಿಗೆ ಬೇಡವೋ? ಒಳ್ಳೇದಾಯ್ತು ಬಿಡು.'

'ಹೌದು. ಅದು ಸರಿ. ಇಲ್ಲಿ ಹೆಂಗುಸರ ಸುಳಿವೇ ಬೇಡವೆನ್ನು ತ್ತಾರೆ ಸರಕಾರದವರು. ಆದರೆ ನನ್ನ ಪರಿಸ್ಥಿತಿಯನ್ನು ಕಂಡು ಒಬ್ಬ ಹೆಣ್ಣುಮಗಳು ಇರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.'

'ಆ ಒಬ್ಬಳು ನಾನಾಗಲಾರೆ. ಆಗುವದು ಶಕ್ಯವಿಲ್ಲ' ಎಂದು ಸ್ಪಷ್ಟವಾಗಿ ಹೇಳಿದಳು.

'ನಾನು ತೀರ ಮುದುಕ. ಇದ್ದೊಬ್ಬ ಮಗನಾದ ರಾಬಿಯು ಯುದ್ಧದಲ್ಲಿ! ನಿನ್ನ ಹೊರತು ನನಗೆ ಯಾರು ದಿಕ್ಕಿದ್ದಾರೆ? ಇಂಥ ಹೊತ್ತಿನಲ್ಲಿ ನನ್ನನ್ನು ಬಿಟ್ಟು ಹೋಗುವದು ನಿನಗೆ ಸರಿಯಾಗಲಾರದು' ಎಂದು ಮುದುಕನು ಸಾಧಕಬಾಧಕ ರೀತಿಯಿಂದ ಅವಳನ್ನು ಅಲ್ಲಿರುವಂತೆ ಒಪ್ಪಿಸಿದನು.

ತನ್ನ ತಂದೆಯು ಈ ಅವಸ್ಥೆಯನ್ನು ಕಂಡು, ಮನಗರಗಿ ಕಟ್ಟಕಡೆಗೆ

ಮೋನಳು ತಂದೆಯ ಮಾತಿಗೆ ಇಲ್ಲೆನಲಿಲ್ಲ. ತಂದೆಯ ಸಲುವಾಗಿಯೇ ಅವಳಿಗೆ ಇರುವ ಭಾಗವಿತ್ತು. ಆದರೆ ಜರ್ಮನ್ನರ ಮಧ್ಯದಲ್ಲಿದ್ದುಕೊಂಡು ಅವರಿಗೆ ಸಹಾಯಮಾಡುವ ವಿಚಾರವನ್ನೇ ಅವಳು ಮಿತಿಮೀರಿ ತಿರಸ್ಕರಿಸದೆ ಬಿಡಲಿಲ್ಲ.

‘ಇಲ್ಲಿರುವುದು ಯುದ್ಧಕ್ಕಿಂತ ಕೇಡು! ಸಾವಿರ ಪಾಲು ಕೇಡು’ ಎಂದು ಅವಳು ನಿರ್ಧರಿಸಿದ್ದಳು.

ಹದಿನೈದು ದಿನಗಳು ಕಳೆದುವು. ವಾಗಿನಗಟ್ಲೆ ಇಟ್ಟಂಗಿ, ಸುಣ್ಣ, ಇಮಾರತಿಯ ಕಟ್ಟಿಗೆ ಮತ್ತು ಮನೆಕಟ್ಟಲು ಬೇಕಾಗುವ ಸಾಮಾನುಗಳೆಲ್ಲವೂ ಬರಹತ್ತಿದವು. ಮುಳ್ಳುತಂತಿಯ ಸಿಂಬಿಗಳಂತೂ ಲೆಕ್ಕವಿಲ್ಲದಷ್ಟು ಬಂದು ಬೀಳತೊಡಗಿದವು. ಹಗಲು ರಾತ್ರಿಯೆನ್ನದೆ ಬಡಿಗರು, ಕಮ್ಮಾರರು ಗೌಂಡಿಗಳು ತೆರಪಿಲ್ಲದೆ ದುಡಿಯಹತ್ತಿದರು. ಹಸಿರು ಮುರಿಯುವ ಹೊಲಗಳ ನಡುವೆಯೇ ಕಾಲುದಾರಿಗಳು ಮಾಡಲ್ಪಟ್ಟವು. ಇಕ್ಕಟ್ಟಾಗಿದ್ದ ದಾರಿಗಳು ರಾಜಬೀದಿಗಳಂತೆ ವಿಸ್ತಾರವಾದವು. ಸುತ್ತಲೂ ಬೇಲಿಗಾಗಿ ಹಚ್ಚಿದ ಹೂಬಿಡಲು ಬಂದ ಗಿಡಗಳನ್ನು ಕಡಿದೊಗೆದು, ಬುಡದಲ್ಲಿ ಡಾಂಬರು ಬಡಿದ ಕಟ್ಟಿಗೆಯ ಕಂಬಗಳು ನಿಲ್ಲಿಸಲ್ಪಟ್ಟವು. ಮನೆಗಳೂ, ಚಪ್ಪರಗಳೂ ಸಾಲುಸಾಲಾಗಿ ಎಲ್ಲೆಲ್ಲಿ ನೋಡಿದರೂ ಕಾಣತೊಡಗಿದವು. ಮೋನಳು ಮಾತ್ರ ಇದಕ್ಕೆ ನಾಟವೆಂದು ಹೆಸರಿಟ್ಟಳು.

ಬೀದಿಯ ಎಡಗಡೆಯ ಭಾಗದ ಸುತ್ತಲೆಲ್ಲ ಎರಡೆರಡು ಸಾಲಿನ ಮುಳ್ಳು ತಂತಿಯನ್ನು ಭದ್ರವಾಗಿ ಬಿಗಿದದ್ದರಿಂದ ಕಾಡುಪಶುಗಳ ಪಿಂಜರದಂತೆ ಆ ಪ್ರದೇಶವು ಕಾಣತೊಡಗಿತು. ಅದೀಗ ವಾಸಿಸಲು ತಕ್ಕುದಾಗಿ ರೂಪುಗೊಂಡಿತು. ಇದೇ ಮೊದಲನೆಯ ಕಂಪೌಂಡು.

ಅಲ್ಲಿಯ ಹೆಣ್ಣುಮಕ್ಕಳೆಂದರೆ ಮೋನಳೊಬ್ಬಳೆ. ಉಳಿದ ಎಲ್ಲ ಹೆಣ್ಣುಮಕ್ಕಳನ್ನು ಕೆಲಸದಿಂದ ತೆಗೆದುಹಾಕಲಾಗಿದೆ. ಅವರ ಸ್ಥಳಗಳಲ್ಲಿ ಗಂಡಸರು ಹುಡುಗರು ನಿಯಮಿಸಲ್ಪಟ್ಟಿದ್ದಾರೆ. ತೆಗೆದುಹಾಕಲ್ಪಟ್ಟ ಹೆಂಗಸರಲ್ಲಿ ಪೀಲಪಟ್ಟಣದ ಒಬ್ಬ ಚಪಲೆಯಾದ ಲೀಝಾಕಿನ್ನಿಸಾ

ಎಂಬವಳು ಯುದ್ಧದ ಮೊದಲು ರಾಬಿಯ ಮೇಲೆ ಕಣ್ಣಿಟ್ಟಿದ್ದಳು. ಅವಳು ಅಲ್ಲಿಯೇ ಇರಬಯಸಿದಳು; ಆದರೆ ಮೋನಳು ಅವಳನ್ನು ಒತ್ತಾಯ ಪಡಿಸಿ ಅಟ್ಟಿಬಿಟ್ಟಳು.

ಸಂಜೆಯ ಸುಮಾರು ಕಟ್ಟಕಡೆಯ ಗಾಡಿಯ ಸೀಟಿಯು ಮೋನಳಿಗೆ ಕೇಳಿಸಿತು. ಸ್ವಲ್ಪ ಹೊತ್ತಿನ ಮೇಲೆ ಸೈನಿಕರ ನಡಿಗೆಯ ರಪ್‌ರಪ್ ಎಂಬ ಕಾಲುಸಪ್ಪಳವು ತೀರ ಸಮೀಪದಲ್ಲಿ ಕೇಳಬಂದಿತು.

ಬಂಧಿತ ಜರ್ಮನ್ನರು ಮೊದಲಿಗೆ ಕಾಲಿಟ್ಟರು. ಕಪ್ಪು ಬಣ್ಣದ ಉಡುಪಿನ ಜನರ ದೊಡ್ಡ ಗುಂಪೊಂದು ಮೆರವಣಿಗೆಯೋಪಾದಿಯಲ್ಲಿ ಬೀದಿಯ ತುಂಬೆಲ್ಲ ಎರಡು ಸಾಲಾಗಿ ಬರುವದು ಮನೆಯ ಮುಂದೆ ನಿಂತ ಮೋನಳಿಗೆ ಕಾಣಿಸಿತು. ಅವರ ಎರಡೂ ಬದಿಗಳಲ್ಲಿ ಸುಸಜ್ಜಿತವಾದ ಬ್ರಿಟಿಶ ಸೈನ್ಯವು ಕಾವಲಾಗಿ ಹೊರಟಿತ್ತು. ಮೋನಳು ನಡುಗಿದಳು; ಸಾಗಿ ಬರುವ ಘಟಸರ್ಪಗಳೋ ಏನೋ ಎಂಬಂತೆ ಅವರೆಲ್ಲರೂ ಕಾಣುವರೆಂದು ಅವಳು ಹೆದರಿದಳು.

ಮರುದಿನ ಬೆಳಿಗ್ಗೆ ತನ್ನ ಮಲಗುವ ಕೋಣೆಯ ಕಿಡಿಕಿಯೊಳಗಿಂದ ಹೊರನೋಡಿದಳು. ಜನರ ತಂಡವು ಇನ್ನೂ ಹೆಚ್ಚಾಗಿರುವದೆಂದು ಅವಳಿಗೆ ದೂರಿನಿಂದಲೇ ಹೊಳೆಯಿತು. ಅವರು ನೋಡಲು ಅಂಜಗೇಡಿಗಳಲ್ಲ. ಉಡುಪುತೊಡುಪು ಚೆನ್ನಾಗಿದ್ದು ಮರ್ಯಾದೆಯುಳ್ಳ ಗೃಹಸ್ಥರೆಂದು ಅವರ ಮುಖಲಕ್ಷಣಗಳ ಮೇಲಿಂದ ಹೇಳಬಹುದು. ಮೋನಳು ಹಸುಗಳ ಕೊಟ್ಟಿಗೆಗೆ ಹೋದಾಗ ಅಲ್ಲಿಯ ಕಾವಲುಗಾರನನ್ನು ಬಂದಂಥವರ ಬಗ್ಗೆ ವಿಚಾರಿಸಿದಳು. ಈಗ ಬಂದಿರುವ ಜರ್ಮನ್ನರೆಲ್ಲರೂ ಉತ್ತಮ ತರಗತಿಯವರಿರುವರೆಂದು ಅವನು ಅವಳಿಗೆ ಹೇಳಿದನು. 'ಅವರಲ್ಲಿ ಬಹು ಜನರು ಶ್ರೀಮಂತರಿರುವರು. ದೊಡ್ಡದೊಡ್ಡ ವ್ಯಾಪಾರಿಗಳಿದ್ದು ಲಂಡನ್ನ ಪಟ್ಟಣದಲ್ಲಿ ಹೆಸರಾಗಿದ್ದಾರೆ. ದೊಡ್ಡದೊಡ್ಡ ಮನೆಗಳಲ್ಲಿ, ಅದೇಕೆ ಅರಮನೆಗಳಂಥ ವಾಡೆಗಳಲ್ಲಿ ನಿವಾಸಿಸುವಂಥವರಿರುತ್ತಾರೆ. ಅವರು ತಮ್ಮ ಇಲ್ಲಿಯ ವಾಸಸ್ಥಳದ ಬಗ್ಗೆಯೂ ಊಟದ ಬಗ್ಗೆಯೂ ತಕರಾರು ಮಾಡುತ್ತಿರುವರೆಂಬ ಸುದ್ದಿಯು ಅವಳಿಗೆ ಹಿಂದುಗಡೆಯಿಂದ ಅವಳ ತಂದೆಯಿಂದ ತಿಳಿದುಬಂದಿತು.

'ಅವರಿಗೆ ಅದೇ ಯೋಗ್ಯ. ಇದಕ್ಕೂ ಹೆಚ್ಚಿನದೇನು ಕೊಡುವದು?' ಎಂದು ಮೋನಳು ಅನ್ನುತ್ತಿದ್ದಳು.

ಮುದುಕ ಮನುಷ್ಯನು ಅವರ ದೂರುಗಳನ್ನು ಶಾಂತರೀತಿಯಿಂದ ಕೇಳಿಕೊಂಡು ಸುಮ್ಮಗಾಗುವನು. ಏನೇ ಆದರೂ, ಅವರೆಲ್ಲರೂ ಹೆಂಡಿರುಮಕ್ಕಳಿಂದ ದೂರಿರಿಸಲ್ಪಟ್ಟ ನಮ್ಮಂತಹ ಜೀವಿಗಳಲ್ಲವೇ ಎಂಬ ಕಾರುಣ್ಯಭಾವವು ಅವನಲ್ಲಿ ಮೂಡದಿರಲಿಲ್ಲ.

'ಆದರೇನು? ಪ್ರತ್ಯಕ್ಷ ಯುದ್ಧದಲ್ಲಿ ಹೋರಾಡುವ ನಮ್ಮ ಜನರ ಪರಿಸ್ಥಿತಿಗಿಂತ ಇವರದೇನು ಕೆಡಕಾಗಿರುವದು? ದ್ರೋಹಿಗಳು! ಕುತ್ತಿಗೊಯ್ಯುಕರು!' ಎಂಬ ಬಿರುನುಡಿಗಳನ್ನು ಮೋನಳು ಆಡಿಯೇ ಆಡುತ್ತಿದ್ದಳು.

'ಬಲು ಕ್ರೂರಳು ನೀನು. ಕಟುಕಿಯು!' ಎಂದು ಮುದುಕನೆಂದನು.

ಮತ್ತೆ ಹದಿನೈದು ದಿನಗಳು ಗತಿಸಿದವು. ಮೊದಲಿನಂತೆ ಮಾಟವು ಮುಂದುವರಿಯುತ್ತಿತ್ತು. ಮೊದಲನೆಯದರ ಬಲಬದಿಗೆ ಎರಡನೆಯ ಕಂಪೌಂಡು ನಿರ್ಮಾಣವಾಯಿತು. ಇರಲೂ ತಕ್ಕುದಾಯಿತು. ಒಂದು ಸಂಜೆಯ ಮುಂದೆ ಅದೇ ಹೊತ್ತಿಗೆ ಮೋನಳಿಗೆ ಮತ್ತೆ ಗುಂಪುಗಳ ಮೇಲೆ ಗುಂಪುಗಳು ಬರುವ ಸಪ್ಪಳವು ಕೇಳಬಂದಿತು. ಈ ತಂಡದವರು ಮೊದಲು ಬಂದವರಿಗಿಂತ ನೂರಾರು ಪಾಲು ಲಕ್ಷಣಹೀನರಾಗಿ ಕಾಣುತ್ತಿದ್ದರು. ಲಿವ್ಹರ್‌ಪೂಲ್, ಗ್ಲಾಸಗೋ ಮೊದಲಾದ ಬಂದರಗಳಲ್ಲಿ ಕೈದು ಮಾಡಲ್ಪಟ್ಟ ನಾವಿಕರೇ ಹೆಚ್ಚಾಗಿದ್ದರು. ಚಿಂದಿಚಿಂದಿಯಾದ ಬಟ್ಟೆಗಳು ಅವರ ಮೈಯಲ್ಲಿದ್ದುದರಿಂದ ಬಲು ಅಸಡ್ಡಾಳಾಗಿ ಕಾಣುತ್ತಿದ್ದರು. ಅವರು ಸ್ವಾನಂದವೃತ್ತಿಯ ಸಮಾಧಾನದಲ್ಲಿದ್ದವರಂತೆ ಕುಣಿಯುತ್ತ, ಹಾಡುತ್ತ, ನಗುತ್ತ, ಕೆಲೆಯುತ್ತ ಬರುತ್ತಿದ್ದರು. ಬಂಧನದ ಪರಿವೆ ಅವರಿಗಿದ್ದಂತೆ ಕಾಣಲಿಲ್ಲ.

ಅವರನ್ನೇ ನೋಡುತ್ತ ಮೋನಳು ಮನೆಯ ಬಾಗಿಲ ಮುಂದೆ ನಿಂತಿದ್ದಾಳೆ. ಅವರು ಅವಳ ಕಡೆಗೆ ನೋಡುತ್ತ ತಮ್ಮ ಭಾಷೆಯಲ್ಲಿ

ಏನೇನೋ ಅಶ್ಲೀಲ ಶಬ್ದಗಳನ್ನುಚ್ಚರಿಸುತ್ತ ಹೊರಟಿದ್ದರು. ಅವರ ಭಾಷೆ ಅವಳಿಗೇನೂ ತಿಳಿಯದು; ಆದರೂ ಅವರ ಮುಖಚರ್ಯೆ, ತುಟಿಗಳ ಸಪ್ಪಳ ಮೊದಲಾದವುಗಳಿಂದ ತನ್ನನ್ನು ಮುದ್ದಿಸುತ್ತಿರುವರೆಂದು ಅವಳು ಅರ್ಥಮಾಡಿಕೊಂಡು 'ನಾಚಿಕೆಗೇಡಿಗಳು! ಪಶುಗಳಿಗಿಂತ ಕಡೆಯವರು' ಎಂದೆನ್ನುತ್ತ ಮನೆಯೊಳಗೆ ದುಡುದುಡನೆ ಓಡಿದಳು.

ಒಂದು ತಿಂಗಳ ನಂತರ ಮೂರನೆಯ ಕಂಪೌಂಡು ಸಿದ್ಧವಾಯಿತು. ಬೀದಿಯ ತುಂಬ ಮತ್ತೆ ಸಾದಾ ನಡಿಗೆಯಿಂದ ಸದ್ದಿಲ್ಲದೆ ಬರುವಂಥ ಒಂದು ಗುಂಪು ಬಂದಿತು. ಮನೆಯಲ್ಲಿದ್ದ ಮೋನಳು ಹೊರಗೆ ಬಂದು ನೋಡುವ ಧೈರ್ಯಮಾಡಲಿಲ್ಲ. ಈ ಜರ್ಮನ್ನರ ಸಂಪರ್ಕದಲ್ಲಿರುವದೂ, ಅವರಿಗೆ ನಾನಾನುಗಳನ್ನು ಒದಗಿಸುವದೂ ಅವಳ ಮನಸಿಗೆ ಬಲು ವ್ಯಥೆಯನ್ನುಂಟುಮಾಡಿತ್ತು.

ಈ ಮೂರನೆಯ ತಂಡವು ತಮ್ಮ ಮನೆಯ ಕಂಪೌಂಡಿನ ಹತ್ತಿರದಿಂದಲೇ ದಾಟಿ, ಅವರಿಗಾಗಿ ಗೊತ್ತುಮಾಡಿದ ಸ್ಥಳಕ್ಕೆ ಹೋಗುತ್ತಿರುವದನ್ನು ಅವಳು ಕಂಡಳು. ಆದರೆ ಈ ಹಿಂದೆ ಬಂದವರಂತೆ ಅವರು ಯಾವ ಗೊಂದಲವನ್ನು ಮಾಡದೆ ಸಾಗುತ್ತಿರುವದು ಅವಳ ದೃಷ್ಟಿಗೆ ಬಿತ್ತು. ಅವರೆಲ್ಲರೂ ಬಹುತರ ತರುಣರು, ಕಾರಕೂನರು, ಡಾಕ್ಟರರು, ಎಂಜಿನಿಯರರು, ನಾನಾತರದ ಉದ್ಯಮವನ್ನು ಕೈಕೊಂಡಂಥವರಿರುವರೆಂಬ ಮಾತು ಅವಳ ತಂದೆಯಿಂದ ಮರುದಿನ ಮುಂಜಾನೆ ಅವಳಿಗೆ ತಿಳಿದು ಬಂದಿತು. ಸಂಸ್ಕೃತಿಸಂಪನ್ನರ ಸ್ಥಿತಿಯೇ ಭಿನ್ನತರವಾಗಿರುತ್ತದೆಂಬದನ್ನು ಇಲ್ಲಿ ಕಾಣಬಹುದಾಗಿತ್ತು.

'ಒಳ್ಳೆ ಸಲಕ್ಷಣವಾದ ಸಮೂಹ'ವೆಂದು ಮುದುಕನು ಉದ್ಗಾರ ತೆಗೆದನು.

ಮೋನಳು ತುಟಿಗಳನ್ನು ಅವಡುಗಚ್ಚಿದಳು. ಅವರು ಜರ್ಮನ್ನರು, ಇದಿಷ್ಟೆ ಅವಳಿಗೆ ಸಾಕಾಗಿತ್ತು—ಎಂಥವರಿದ್ದರೇನು ಅವರು!

ಜರ್ಮನ್ನರ ವಿಷಯದಲ್ಲಿ ಮೋನಳ ತಿರಸ್ಕಾರವು ಪ್ರತಿಕ್ಷಣಕ್ಕೂ ಹೆಚ್ಚಾಗುತ್ತಲೇ ನಡೆದಿತ್ತು; ಆದರೂ ದಿನಕ್ಕೆರಡು ಸಲವಾದರೂ ಅವಳಿಗೆ

ಅವರ ದರ್ಶನವಾಗದೆ ನಿರ್ವಾಹವಿಲ್ಲ. ಅಂಗರಕ್ಷಕರೊಡನೆ ಒಂದಂಥ ವರಿಗೆ ಮೊತ್ತ, ಗೊತ್ತುಪಡಿಸಿದಷ್ಟು ಹಾಲನ್ನು ಮುಂಜಾನೆ, ಸಂಜೆಗೆ ಅವಳು ಹೀಗೆ ಎರಡು ಹೊತ್ತು ಕೊಡಬೇಕು. ಅವರು ಅವಳನ್ನು ಬೇಕೆಂತಲೇ ಮಾತನಾಡಿಸುವ ಪ್ರಯತ್ನ ಮಾಡುತ್ತಿದ್ದರೂ ಅವಳು ಉತ್ತರ ವನ್ನೇ ಕೊಡುತ್ತಿದ್ದಿಲ್ಲ; ಹಿಂಗೊಡಬಾರದೆಂದೂ ಪ್ರಯತ್ನಿಸುತ್ತಿದ್ದಳು. ಕೇಳಿಸದಂತೆ ನಟಿಸುತ್ತಿದ್ದಳು.

ಮೂರನೆಯ ಕಂಪಾಂಡಿನೊಳಗಿಂದ ನಸಿಬೇಸಿ ಹತ್ತಿದ ಸಪ್ಪಗಿನ ಮುಖದ ಒಬ್ಬ ತರುಣನು ಯಾವಾಗಲೂ ಕಟ್ಟೆಕಡೆಗೆ ಬರುತ್ತಿದ್ದನು. ಗೂರು ಹತ್ತಿದವರಂತೆ ಕೆಮ್ಮುತ್ತ ಅವನು ಬರುತ್ತಿರುವದರಿಂದ ಅವನಿಗೆ ಕ್ಷಯಬೇನೆ ಹಿಡಿದಿರಬೇಕೆಂದು ಮೋಹನಳು ಭಾವಿಸಿದ್ದಳು. ಅವನ ಬಗ್ಗೆ ಅವಳಲ್ಲಿ ಕರುಣಭಾವನೆಯ ಊರ್ಮಿಯು ಮೂಡಿತೆನ್ನುವಷ್ಟ ರಲ್ಲಿ ಮಟಾಮಾಯವಾಗುತ್ತಿತ್ತು. ಏನೇ ಆದರೂ ಯುದ್ಧವನ್ನು ಹೂಡಿ ದಂಥ ಪಶುಗಳ ಪೀಳಿಗೆಯವನಲ್ಲವೇ ಅವನು! ಎಂಬುದಿಷ್ಟೇ ಅವಳ ಹೃದಯವನ್ನು ಕರಗಿಸಲು ಶಕ್ತವಾಗಲಿಲ್ಲ.

ವರ್ತಮಾನಪತ್ರಗಳು ತಪ್ಪದೆ ಬರುತ್ತಿದ್ದವು. ಪ್ರತಿದಿನ ರಾತ್ರಿಯೂ ಮುದುಕನು ಊಟವಾದೊಡನೆ ಮನೆಯಲ್ಲಿರುವವರಿಗೆಲ್ಲ ವರ್ತಮಾನ ಪತ್ರಗಳನ್ನು ಓದಿ ಹೇಳುತ್ತಿದ್ದನು. ಯುದ್ಧಸ್ಯ ವಾರ್ತಾ ರಮ್ಯವಲ್ಲವೇ? ಇದುವರೆಗೂ ಮುಂದುವರಿಯುತ್ತಿದ್ದ ಜರ್ಮನ್ನರು ಈಗ ಹಿಮ್ಮೆಟ್ಟುತ್ತ ಲಿದ್ದಾರೆ. ಮಿತ್ರಸಂಘಗಳ ಸಹಕಾರವು ದೊರೆತಿದೆ. ಅಲ್ಪಾವಕಾಶ ದಲ್ಲಿಯೇ ಒಮ್ಮೆ ಯುದ್ಧದ ಸೋಕ್ಷಮೋಕ್ಷವಾಗಿಯೇ ತೀರುವ ಸಂದರ್ಭವೊದಗಿದೆ. ನಡುಗುತ್ತಿದ್ದ ಮುದುಕನ ಧ್ವನಿಯು ಗಡುಸಾ ಯಿತು. ವರ್ತಮಾನಪತ್ರವನ್ನು ಓದುವದಾದ ಮೇಲೆ ನಿತ್ಯದಂತೆ ದೇವರ ಪ್ರಾರ್ಥನೆಯ ಕೊನೆಯ ಭಾಗಕ್ಕೆ ಬಂದೊಡನೆ, ತೆರೆದ ದೊಡ್ಡ ಪುಸ್ತಕ ವನ್ನು ಮುಚ್ಚಿ, ತಲೆಯನ್ನು ಅದರ ಮೇಲೆ ಚಲ್ಲಿ, ಕಣ್ಣುಗಳನ್ನು ಮುಚ್ಚಿ, ಎರಡೂ ಕೈಗಳನ್ನು ಜೋಡಿಸಿ, 'ಶಾಂತಿಯು ನನ್ನಲ್ಲಿದೆ. ನನ್ನ ಶಾಂತಿಯನ್ನೇ ನಿನಗೆ ದಯಪಾಲಿಸುವೆ; ಕ್ಷಣಿಕವಾಗಿ ನಾನದನ್ನು

ನೀಡಲಾರೆ. ನಿನ್ನ ಹೃದಯವು ವ್ಯಥೆಪಡೆಯದಿರಲಿ, ಅಂಜದಿರಲಿ' ಎಂದು ಭಕ್ತಿಪೂರ್ವಕವಾಗಿ ಬೇಡಿಕೊಳ್ಳುವನು.

ಅಡುಗೆಮನೆಯಿಂದ ಆಳುಗಳೆಲ್ಲವೂ ಹೋದಮೇಲೆ ಅಗ್ಗಿಷ್ಟಿಗೆ ಬದಿಯಲ್ಲಿಯ ಗೋಡೆಗೆ ಆತು ನಿಂತು 'ತಂದೆಯೇ, ನಿಜವಾಗಿಯೂ ನಿನಗೆ ಶಾಂತತೆಯು ಬೇಕಾಗಿದೆಯೇ?' ಎಂದು ಮೋನಳು ನೀರ ದನಿಯಿಂದ ಕೇಳಿದಳು.

'ಒಳಿತಾಗುವದಕ್ಕಾಗಿ; ಮಗಳೇ, ಶಾಂತಿಯು ಯಾಕೆ ಬೇಡ ಹೇಳು?'

'ನನಗೆ ಬೇಡ. ನನಗೆ ಬೇಕಾದುದು ಯುದ್ಧ. ಇಲ್ಲಿಯ ರಾಕ್ಷಸರು ಅವರವರ ಮನೆಗಳಿಗೆ ಅಟ್ಟಲ್ಪಡುವವರೆಗೆ ಇಲ್ಲವೆ ಈ ಜಗತ್ತಿನಿಂದ ಸಮೂಲ ನಾಶವಾಗುವವರೆಗೆ ಇನ್ನೂ ಹೆಚ್ಚಿಗೆ ಯುದ್ಧವು ಬೇಕೇ ಬೇಕು' ಎಂದು ಅವಳು ತನ್ನ ವಿಚಾರವನ್ನು ವ್ಯಕ್ತಪಡಿಸಿದಳು.

ಮುಂದೆ ಕೆಲದಿನಗಳ ಮೇಲೆ, ರಾಬಿಯಿಂದ ಒಂದು ಪತ್ರವು ಬಂದಿತು. ತನ್ನನ್ನೀಗ ಲೆಫ್ಟಿನಂಟನನ್ನಾಗಿ ಮಾಡಿದ್ದಾರೆ. ತನ್ನಲ್ಲಿ ತುಂಬಾ ಉತ್ಸಾಹವಿದೆ. ಯುದ್ಧದ ದಿಶೆಯು ದಿನದಿನಕ್ಕೆ ಬಲವಾಗುತ್ತ ನಡೆದಿದೆ. ಆದುದರಿಂದ ಮೊದಲಸಲವೆ ತಾನೀಗ ಮುಂಭಾಗಕ್ಕೆ ಅಣಿಯಾಗಬೇಕು. ಎಲ್ಲ ವ್ಯವಸ್ಥೆಯನ್ನು ಮಾಡಿಕೊಳ್ಳುವ ಗಡಿಬಿಡಿ. ಮತ್ತೆ ಬೇಗನೆ ಬರೆಯುವೆನು ಎಂದು ಮುಂತಾಗಿ ಬರೆದು, 'ತಂದೆಯೇ, ನನ್ನನ್ನು ಆಶೀರ್ವದಿಸಿರಿ. ನಿನ್ನೆ ಊಟಕ್ಕೆ ಕುಳಿತಾಗ ಮೋನಳ ಪತ್ರದ ಕೊನೆಯ ಭಾಗವನ್ನು ಕೆಲವು ಅಧಿಕಾರಸ್ಥರ ಮುಂದೆ ಓದಿದೆನು. ಓದುವದಾದ ಮೇಲೆ 'ಓ, ದೇವರೇ! ಹುಡುಗಿಯು ದಿಗಿಲುಗೊಳಿಸುವಂಥವಳು!' ಎಂದು ಎಲ್ಲರೂ ಏಕಕಂಠದಿಂದ ಕೂಗಿದರು. ಆ ಮೇಲೆ ಮುಖ್ಯಸ್ಥನೊಬ್ಬನು 'ನಿನ್ನ ತಂಗಿಯಷ್ಟು ಹುರುಪುಳ್ಳ ಸಾವಿರ ಜನರಿದ್ದರೆ ಈ ಯುದ್ಧವು ಒಂದು ತಿಂಗಳು ಕೂಡ ನಡೆಯಲಾರದೆಂದು ಮಾತಾಡಿದನು' ಎಂಬ ಸುದ್ದಿಯನ್ನು ಮೋನಳಿಗೆ ತಿಳಿಸಬೇಕು ಎಂದೂ ಬರೆದಿದ್ದನು.

ರಾಜಿಯ ಪತ್ರ ಬಂದು ಒಂದು ವಾರವಾಗಿರಲಿಲ್ಲ. ವೈರಿಗಳು ಪಲಾಯನಸೂತ್ರ ಹೇಳಿಸಿದರು. ಆಶ್ಚರ್ಯಕರವಾದ ಜಯ! ವೆಂಬ ಸುದ್ದಿಯು ವರ್ತಮಾನಪತ್ರಗಳಲ್ಲಿ ಪ್ರಕಟವಾಗಿತ್ತು. ಪ್ರತಿದಿನವೂ ಸಂಜೆಯಲ್ಲಿ ಕ್ಯಾಂಪಿನ ಅಂಚೆಯವನು ಬರುವ ಹೊತ್ತಿಗೆ ಮುದುಕನು ಚುರುಟನನ್ನು ಬಾಯಲ್ಲಿಟ್ಟುಕೊಂಡು ಹೊರಗೆ ದಾರಿಯಮೇಲೆ ನಿಲ್ಲುತ್ತಿದ್ದನು. ಬಿಸಿಬಿಸಿ ಸುದ್ದಿಯನ್ನು ತಿಳಿಯಲು ಅಷ್ಟೊಂದು ಆತುರತೆಯು ಅವನಲ್ಲಿ ಕಂಡುಬರುತ್ತಿತ್ತು. ಮತ್ತೆ ಬರೆಯುವೆನೆಂದು ವಚನವಿತ್ತ ರಾಜಿಯ ಪತ್ರವೂ ಇನ್ನೂ ಬಂದಿರಲಿಲ್ಲ. ಸಂಜೆಯ ಮುಂದೆ ಕೈದೋಟದ ದಾರಿ ಹಿಡಿದು ಮೆಲ್ಲನೆ ಬಂದೊಂದು ಹೆಜ್ಜೆಯನ್ನಿಕ್ಕುತ್ತ ಬರುವ ಅಂಚೆಯವನು ಅತ್ತಿಗೆಮನೆಯ ಕಿಡಿಕಿಯೊಳಗಿಂದ ಮೋನಳ ಕಣ್ಣಿಗೆ ಬಿದ್ದನು. ಅವನ ಕೈಯಲ್ಲೊಂದು ಪತ್ರವಿತ್ತು. ಆದೇಕೋ ಅವಳ ಹೃದಯವು ಕಲಕಿತು. ಅಂಚೆಯವನು ತಂದೆಯ ಕೈಯಲ್ಲಿ ಪತ್ರವನ್ನು ಕೊಟ್ಟವನೆ ಪಟ್ಟೆಂದು ಮಾತನಾಡದೆ ಹಿಂದಿರುಗಿಯೆ ಬಿಟ್ಟನು. ಮುದುಕನು ಅದನ್ನು ತೆಗೆದುಕೊಂಡು ಬುಡುಮೇಲುಮಾಡಿ ನೋಡಿದನು. ಅದು ದೊಡ್ಡದಿದ್ದು ಒಂದು ತುದಿಯಲ್ಲಿ ಮುದ್ರಿತ ಅಕ್ಷರಗಳಿದ್ದವು. ಕಡೆಗೆ ನಡುಗುವ ಕೈಗಳಿಂದ ಲಕೋಟಿಯನ್ನು ಒಡೆದು ಪತ್ರವನ್ನು ಹೊರತೆಗೆದನು. ಓದಲು ಯತ್ನಿಸಿದನು; ಸಾಧ್ಯವಾಗಲಿಲ್ಲ. ಮೋನಳು ಇದನ್ನು ಕಂಡು ಅವನಿದ್ದಲ್ಲಿಗೆ ಓಡಿ ಬಂದಳು.

'ತಂಗೀ, ಇದನ್ನೋದು' ಎಂದು ನಿಸ್ಸಹಾಯಕನಾಗಿ ಹೇಳಿ, ಅಲ್ಲಿಯೇ ಇದ್ದ ಬಂದು ಗಿಡಕ್ಕೆ ಅವನು ಆತುಕೊಂಡು ನಿಂತನು.

'ಯುದ್ಧಮಂತ್ರಿಗಳಿಂದ ದುಃಖಪೂರ್ವಕವಾಗಿ ತಿಳಿಸುವದೇನಂದರೆ.......' ಅವಳಿಗೂ ಮುಂದೆ ಓದಲಾಗಲಿಲ್ಲ ಮಂಕುಬಡಿದವಳಂತೆ ನಿಂತಳು. ಮುಂದೆ ಓದುವ ಕಾರಣವಿಲ್ಲ. ರಾಜಿಗೆ ವೀರಸ್ವರ್ಗವು ದೊರೆತಿದೆ. . . . ಮುದುಕನ ಸ್ಮೃತಿಯು ತಪ್ಪಿತು. ಸಿಡಿಲೆರಗಿದಂತೆ ಅವನು ದೊಪ್ಪನೆ ನೆಲಕ್ಕುರುಳಿದನು. ಆಳುಗಳನ್ನು ಕೂಗಿ ಕರೆದಳು. ಅವರು ಬಂದು ಮುದುಕನನ್ನು ಮನೆಯೊಳಗೊಯ್ದು ಹಾಸುಗೆಯ ಮೇಲೆ ಮಲಗಿಸಿದರು.

ಮೊದಲನೆಯ ಕಂಪೌಂಡಿನಲ್ಲಿದ್ದ ಇಂಗ್ಲಿಷ ಡಾಕ್ಟರನನ್ನು ಕರೆತರಲು ಅವಳೇ ಧಾವಿಸಿ ನಡೆದಳು.

ಮುದುಕನಿಗೆ ಪಕ್ಷಘಾತವಾಯಿತು. ಕೆಲವೊಂದು ದಿನಗಳ ವರೆಗೆ ಹಾಸುಗೆಯಲ್ಲಿ ಬಿದ್ದುಕೊಳ್ಳಬೇಕು. ಸಂಪೂರ್ಣ ವಿಶ್ರಾಂತಿಯು ಅವಶ್ಯವಾದುದು. ಪತ್ರ, ವರ್ತಮಾನಪತ್ರಗಳನ್ನಾಗಲಿ ತಲುಪಿಸಕೂಡ ದೆಂದು ಡಾಕ್ಟರರ ಅಪ್ಪಣೆಯಾಯಿತು. ಪಾಪ! ದೊಡ್ಡ ವಿಪತ್ತಿಗೀಡಾದನು. ಆತನ ಮನಸಿಗೆ ಹತ್ತುವಂಥವಾವುದೂ ಅವನಿಗೆ ತಿಳಿಸಕೂಡದು. ಆತನುಳಿಯಬೇಕಾದರೆ ಅದೊಂದೆ ಉಪಾಯ.

ಮೋನನು ದನಿತೆಗೆಯಲಿಲ್ಲ. ಕಣ್ಣು ನೀರಿನಿಂದ ತುಂಬಿದವು. ಕುತ್ತಿಗೆಯ ಶಿರವು ಉಬ್ಬಿತು. ಮೂಗಿನ ಹೊರಳಿಗಳು ಅಲುಗಾಡಿದವು. ಜರ್ಮನ್ನರ ಬಗ್ಗೆ ಇದ್ದ ಅವಳ ತಿರಸ್ಕಾರವು ಮೊದಲಿಗಿಂತಲೂ ಭೀಕರವಾಯಿತು. ಅವರು ಅವಳ ಅಣ್ಣನನ್ನು ಸಾಯಗೊಂದಿದ್ದಾರೆ; ತಂದೆಯನ್ನು ಹಾಸಿಗೆ ಹಿಡಿಸಿದ್ದಾರೆ. ದೇವರು ಅವರೆಲ್ಲರನ್ನು ಶಿಕ್ಷಿಸಲಿ ಎಂಬ ಶಾಪವು ಅವಳ ಬಾಯಿಯಿಂದ ಹೊರಡುತ್ತಲಿತ್ತು. ಪ್ರತಿಯೊಬ್ಬ ವೈರಿಗೆ ಶಿಕ್ಷೆಯಾಗಬೇಕು; ಜರ್ಮನ್ನರು ಸಣ್ಣಾಗಬೇಕು. ದೇವರು ಶಿಕ್ಷಿಸದೆ ಹೋದರೆ—ಆತನು ಇರುವದಿಲ್ಲ, ಇರಲಾರ, ಇರಬಾರದು-ಎಂಬ ಭಾವನೆಯು ರಾಜ್ಯದಲ್ಲಿ ಅವಳು ತೊಡಗಿದ್ದಳೆಂಬುವಂತೆ ಕಾಣುತ್ತಿದ್ದಳು.

---

## ತಿರುವುಮುರುವು

ಮೂರು ತಿಂಗಳು ಕಳೆದವು. ಕೈದಿಗಳ ಕ್ಯಾಂಪು ದೊಡ್ಡದಾಗುತ್ತ ಸಾಗಿಯೇ ಇದೆ. ಈಗ ಐದು ಕಂಪೌಂಡುಗಳು. ಇಪ್ಪತ್ತೈದು ಸಾವಿರ ಕೈದಿಗಳಿರುವರಲ್ಲದೆ ಬ್ರಿಟಿಶ್ ಕಮಾಂಡಂಟ, ಅವನ ಕೈಕೆಳಗಿನವರು, ಕಾವಲುಗಾರರು ಕೂಡಿ ಎರಡುಸಾವಿರ ಜನರಿದ್ದಾರೆ. ಸುತ್ತೂ ಕಡೆಗೆ ಮುಳ್ಳುತಂತಿಯ ಬೇಲಿ. ಭದ್ರವಾಗಿ ಹಾಕಲ್ಪಟ್ಟಿದೆ. ಎಲ್ಲೆಲ್ಲಿಯೂ ಮನೆ, ಚಪ್ಪರಗಳು. ಹಸಿರು ಮುರಿಯುವಂಥ ಹುಲ್ಲುಗಾವಲವು

ಹೋಗಿ ಈಗ ಹೊಲಸು ನಾರುವ ಕಪ್ಪಾದ ತುರಂಗವಾಗಿದೆ. ಒಕ್ಕಲು ಮನೆಯ ಮೊದಲಿನ ಸುಖಶಾಂತಿಯು ಹೇಳಹೆಸರಿಲ್ಲದೆ ಎಲ್ಲಿಯೋ ಓಡಿ ಹೋಗಿದೆ.

ಇಪ್ಪತ್ತೇಳು ಸಾವಿರ ಜನರಲ್ಲಿ ಮೋಸಳೊಬ್ಬಳೇ ಹೆಣ್ಣುಮಗಳು. 'ನೌಕಾಲೋಯ್ ಸ್ತ್ರೀ' ಎಂಬ ಹೆಸರಿನಿಂದ ಬ್ರಿಟಿಶ್ ಕಮಾಂಡಂಟನು ಇವಳನ್ನು ಕರೆಯುವನು. ತನ್ನ ಅಣ್ಣ ತೀರಿದ ದುಃಖವು, ತಂದೆಯ ವ್ಯಥೆಯೂ ಈಗ ತುಸು ಕಡಿಮೆಯಾದ್ದರಿಂದ ಮೋಸಳು ಮೊದಲಿನಂತೆ ಕೆಲಸವನ್ನು ಆರಂಭಿಸಿದ್ದಾಳೆ. ತಂದೆಯನ್ನು ಬಿಟ್ಟು ಎಲ್ಲಿಯೂ ಬಹಳ ಹೊತ್ತು ಹೋಗುವಂತಿರದಿದ್ದರೂ ಹಸುಗಳ ಕೊಟ್ಟಿಗೆಗೆ ಹೋಗಿಯೇ ತೀರಬೇಕು; ವ್ಯವಸ್ಥೆಯನ್ನು ನೋಡಿಕೊಂಡು ಬರುತ್ತಿದ್ದಳು. ಹೀಗಾಗಿ ನೌಕಾಲೋಯ್ ಅವಳಿಗೆ ಬಿಡುವದು ಅಸಾಧ್ಯವಾಗಿತ್ತು.

ಹಗಲಿನಲ್ಲಿಯೂ ಕೆಲಸದಲ್ಲಿಯೆ ಕೊಂಚ ಹೊತ್ತು ಬಿಡುವು ಮಾಡಿಕೊಂಡು ತಂದೆಯ ಬಳಿಗೆ ಧಾವಿಸುತ್ತಿದ್ದಳು. ರಾತ್ರಿಯಲ್ಲಿ ಕೆಲಸ ವಾದ ಮೇಲೆ ತಂದೆಗೆ ಓದಿಹೇಳುತ್ತಿದ್ದಳು. ಈಗ ಓದಿಸಿಕೊಳ್ಳುವದು ಬೈಬಲ್ಲೊಂದೆ. ಪ್ರಾರ್ಥನೆಯ ಭಾಗವನ್ನು ಈಗ ಆಲಿಸಲಾರನು; ಆದರೆ ಹಳೆಯ ಒಡಂಬಡಿಕೆಯಲ್ಲಿಯ ವ್ಯಥಿತನಾದ ಜಾಬನ ಕಥೆ. ಆನಂದ ದಾಯಕವಾದ ಗೀತಗಳು ಅವನಿಗೆ ಬೇಡವಾಗಿದ್ದವು. ವೈರಿಗಳ ಸೇಡು ತೀರಿಸಲು ದೇವನನ್ನು ಬೇಡಿಕೊಂಡ ಡೇವಿಡ್ಡನ ಹಾಡುಗಳು ಇಷ್ಟ ವಾಗಿದ್ದವು. ಅವಳ ತಂದೆಯು ಈಗ ತೀರ ಬದಲಾದ ಮನುಷ್ಯನು. ಅವನ ಹೃದಯವು ದ್ವೇಷದಿಂದ ಕುದಿಯುತ್ತಿದೆ. ಡೇವಿಡ್ಡನ ಆರ್ತಭಾವ ಗೀತೆಯಿಂದ ಭೀಕರವಾದ ಆನಂದವನ್ನು ಹೊಂದುತ್ತಾನೆ. ತಾನೊಬ್ಬನೇ ಇದ್ದಾಗ ಅವುಗಳನ್ನು ಒಂದೇಸವನೆ ಗುಣಗುಣಿಸುತ್ತಿರುತ್ತಾನೆ.

ಹುಡುಗಿಯಲ್ಲಿ ಯಾವ ಬದಲಾವಣೆಯಾಗಿರಲಿಲ್ಲ. ದೈವದಾಟದಲ್ಲಿ ಎಂಥ ವಿಪತ್ತುಗಳು ಬಂದರೂ ಎದೆಗುಂದದೆ ನಿಶ್ಚಿಂತರಾಗಿ ಬಾಳುವ ಕೆಲ ಜನರು ಇದ್ದೇ ಇರುತ್ತಾರೆ.

ಕ್ರಿಸ್‌ಮಸ್ ಮುಗಿದಿತು; ಮತ್ತೊಂದು ಬಂದಿತು. ವಸಂತಕಾಲವೂ

ಹೋಗಿ ಮತ್ತೊಂದು ಬಂದಿತು. ಅಲ್ಲಿಯ ಕೈದಿಗಳ ಜೀವನವನ್ನು ಮೋನಳು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದಾಳೆ. ಮುಂಜಾನೆದ್ದ ಕೂಡಲೆ ಅವಳ ಕಣ್ಣಿಗೆ ಕಾಣುವದೆಂದರೆ ಗುಂಪುಗುಂಪಾಗಿ ಅಸ್ತವ್ಯಸ್ತವಾಗಿ ಕುಳಿತ ಕೈದಿಗಳು-ಪಿಂಜರದೊಳಗಿನ ಕ್ರೂರಮೃಗಗಳು. ರಾತ್ರಿ ಮಲಗಲು ಹೋಗುವ ಮುಂದೆ ಕೈದಿಗಳು ತಪ್ಪಿಸಿ ಓಡಿಹೋಗಬಾರದೆಂದು ಅಲ್ಲಲ್ಲಿ ನಿಲ್ಲಿಸಿದ ಬೆಳಗಿನ ದೀಪಗಳ ಹೊರತು ಮತ್ತೇನೂ ಕಾಣಬರದು. ಮೇಲಿಂದಮೇಲೆ ಅಲ್ಲಿ ಜರುಗುವ ಬಡಿದಾಟ, ಹೊಡೆದಾಟಗಳನ್ನು ನಿರ್ದಯತನದಿಂದ ನಿಲ್ಲಿಸುವದನ್ನು ಅವಳು ನೋಡುತ್ತಿದ್ದಳು. ಮೊದಲನೆಯ ಕಂಪೌಂಡಿನೊಳಗಿನ ಅಡುಗೆಯ ಮನೆಯ ಮೇಲೆ ದಾಳಿಯಿಟ್ಟು ಹಾಳುಮಾಡಿದವರಲ್ಲಿ ನಾಲ್ವರು ಗಾರ್ಡನ ಗುಂಡಿನೇಟಿಗೆ ತುತ್ತಾದರೆಂಬ ಸುದ್ದಿಯೂ ಅವಳ ಕಿವಿಗೆ ಬಿದ್ದಿತ್ತು. ತಕ್ಕ ಶಿಕ್ಷೆ! ಹೀಗೇ ಆಗಬೇಕು ಇವರಿಗೆ! ಅವಳಿಗೆ ಜರ್ಮನರ ವಿಷಯದಲ್ಲಿ ಏನು ಬೇಕಾದುದಾದರೂ ಕನಿಕರ ಉಂಟಾಗುವದು ಅಸಾಧ್ಯವಾಗಿತ್ತು.

ಎರಡನೆಯ ಕಂಪೌಂಡಿನೊಳಗಿನ ಹುಂಬ, ಹೇಸಿ ಜನರ ಕೆಟ್ಟ ಕೆಲಸಗಳಿಗಾಗಿ ರಕ್ಷಕರು ಬೇಸತ್ತಿದ್ದರು. ಕೈದಿಗಳನ್ನು ಬೇಕಾದ ಹಾಗೆ ಕ್ರೂರತನದಿಂದ ಶಿಕ್ಷಿಸುತ್ತಿದ್ದರು. ಆದರೂ ಅವರ ಕಾಟವು ಕಡಿಮೆಯಾಗಲೊಲ್ಲದು. ಮೋನಳಿಗೆ ಒಮ್ಮೊಮ್ಮೆ ಕೆಲಸದ ದೆಸೆಯಿಂದ ಈ ಎರಡನೆಯ ಕಂಪೌಂಡಿನ ಬದಿಯಿಂದ ಹಾಯ್ದು ಹೋಗಬೇಕಾಗುತ್ತಿತ್ತು. ಆಗ ತಂತಿಯ ಒಳಬದಿಯಿಂದ ಅಲ್ಲಿಯ ನೀಚರು ತನ್ನನ್ನು ಕೆಟ್ಟ ಕಣ್ಣುಗಳಿಂದ ನೋಡಿ ಮಂಗಗಳಂತೆ ಹಲ್ಲು ಕಿರಿಚುವದನ್ನು ಅವಳು ಅನುಭವಿಸದಿರಲಿಲ್ಲ. ಅವಳ ರಕ್ತವು ಕುದಿಯುವದು. ಅವರು ತನ್ನನ್ನು ಕಡೆಗಣ್ಣಿನಿಂದ ನೋಡಿ ಅಪಮಾನಿಸುತ್ತಿರುವರೆಂಬುದು ಅವಳ ತಲೆಯಲ್ಲಿ ಬಾರದಿರಲಿಲ್ಲ. ಪಶುಗಳು, ರಾಕ್ಷಸರು—ಇಂಥವರಿಗೆ ಬುದ್ಧಿ ಎಲ್ಲಿಂದ ಬರಬೇಕು?

ಬಿಸಿಲುಗಾಲದ ಒಂದು ಮುಂಜಾವಿನಲ್ಲಿ ಸಮುದ್ರದ ಕಡೆಯಿಂದ ಬಂದ ತೋಫಿನ ಅದ್ಭುತ ಸಪ್ಪಳವು ಇನ್ನೂ ಮಲಗಿದ ಮೋನಳನ್ನು

ಎಚ್ಚರಿಸಿತು. ಗಾಬರಿಯಾಗಿ ಹೊರಬಂದು ನೋಡಿದಳು. ಬಂದರದಲ್ಲಿ ಯುದ್ಧದ ಹಡಗವೊಂದು ಅದೇ ಬರುತ್ತಲಿತ್ತು. ಅಧಿಕಾರಸ್ಥರ ಗಡಿಬಿಡಿಯು ಬಲು ಜೋರಿನಿಂದ ನಡೆದಿವೆ. ಲಂಡನ್ನಪಟ್ಟಣದಿಂದ ಹೋಮ ಸೆಕ್ರೆಟರಿಯು ಕ್ಯಾಂಪಿನ ಮೇಲ್ವಿಚಾರಣೆಗಾಗಿ ಬಂದಿರುವನೆಂದು ತಿಳಿದು ಬಂದಿತು. ಗವ್ಹರ್ನರನು, ಕಮಾಂಡಂಟನು, ಸೆಕ್ರೆಟರಿ ಮೂವರೂ ಕೂಡಿಕೊಂಡು ಕಂಪೌಂಡಿನೊಳಗೆ ಸುತ್ತಹತ್ತಿದರು. ಮಧ್ಯಾಹ್ನ ವಾಯಿತು. ಕಮಾಂಡಂಟನ ಮನೆಗೆ ಹೋಗಬೇಕಾದರೆ ಒಕ್ಕಲು ಮನೆಯ ಮೇಲಿಂದಲೇ ಹಾಯ್ದುಹೋಗಬೇಕು. ಆದಕಾರಣ ಅವರು ಮೆಲ್ಲಗೆ ಮಾತನಾಡುತ್ತ ಸಾಗಿದ್ದರು. ಅಡುಗೆಮನೆಯ ಕಿಡಿಕಿ ತೆರೆದದ್ದರಿಂದ ಮೋನಳ ಕಿವಿಗೆ ಆ ಸಿಟ್ಟಿಗೆದ್ದ ಹೊಸಬನ ಮಾತುಗಳು ಬಿದ್ದವು:

'ಅವರಿಂದ ಹೆಚ್ಚಿಗೇನನ್ನೂ ಅಪೇಕ್ಷಿಸಬಾರದು. ನಾಯಿಗಳಂತೆ ಅವರನ್ನು ಇಡಿರಿ. ನಾಯಿಯ ಗುಣಗಳೇ ಅವರಲ್ಲಿ ಬೆಳೆಯಹತ್ತಿದರೆ ಆಶ್ಚರ್ಯಪಡಬೇಕಾದುದಿಲ್ಲ. ಅವರಿಂದ ನೌಕರಿ ಕೆಲಸ ತೆಗೆದು ಕೊಳ್ಳುವದೊಂದೇ ಉಪಾಯವಿದೆ' ಎಂದು.

ಕೆಲದಿನಗಳು ಕಳೆದನಂತರ ಬಡಿಗರು, ಕಮ್ಮಾರರು, ಗೌಂಡಿಗಳು ಕೂಡಿಕೊಂಡು ಕಾರಖಾನೆಗಳನ್ನು ಕಟ್ಟುವುದರಲ್ಲಿ ತೊಡಗಿದ್ದಾರೆ. ತಿಂಗಳೊಪ್ಪತ್ತಿನಲ್ಲಿಯೇ ಈ ಮನೆಗಳೊಳಗಿಂದ ಕೊರೆಯುವ ಸಪ್ಪಳ, ಸುತ್ತಿಗೆಯ ಹೊಡೆತ ಕೇಳಬಂದವು. ಕೈದಿಗಳನ್ನು ಕೆಲಸದಲ್ಲಿ ತೊಡಗಿಸಿದ್ದಾರೆಂಬ ಮಾತು ಮನವರಿಕೆಯಾಯಿತು. ಮೋನಳಿಗೆ ನಗೆಯು ತಡೆಯಲಿಲ್ಲ. ಬಿದ್ದುಬಿದ್ದು ನಕ್ಕಳು. ಈ ಕಾಡುಪಶುಗಳನ್ನು ಮಾನವ ಜೀವಿಗಳನ್ನಾಗಿ ರೂಪುಗೊಳಿಸುವದು ಯಾರಿಂದಲೂ ಸಾಧ್ಯವಿಲ್ಲ—ಎಂದಿಗೂ ಆಗದ ಮಾತು ಎಂದು ಅವಳು ಗ್ರಹಿಸಿದ್ದಳು.

ಶರತ್ಕಾಲವಾಗಮಿಸಿದ್ದರಿಂದ ಬೆಳೆಗಳೆಲ್ಲವೂ ಮಾಗಿ ಹಳದಿಯಾಗಿ ಕೊಯ್ಯಲು ಬಂದಿವೆ; ಆದರೆ ಹೊಲದ ಕೆಲಸಕ್ಕೆ ಉಪಯುಕ್ತರಾದ ಮಾಂಕ್ಸ ಹುಡುಗರೆಲ್ಲರೂ ಯುದ್ಧಕ್ಕೆ ಕಳಿಸಲ್ಪಟ್ಟದ್ದರಿಂದ, ಬೇಗನೆ ಬೆಳೆ ಕೊಯ್ದುಹಾಕದಿದ್ದರೆ ಕಾಳುಗಳೆಲ್ಲವೂ ಉದುರಿಬೀಳುವವೆಂದು

ಒಕ್ಕಲಿಗರು ಅನ್ನತೊಡಗಿದರು. ಜನರ ನೆರವು ಬೇಕೇಬೇಕೆಂಬ ಕೂಗು ಕಮಾಂಡಂಟನ ಕಿವಿವರೆಗೂ ಹೋಗಿ ಮುಟ್ಟಿತು.

ಸುಗ್ಗಿಯನ್ನು ಒಕ್ಕಲಿಕ್ಕೆ ಒಳ್ಳೆ ನಡತೆಯುಳ್ಳ ಕೆಲವು ಕೈದಿಗಳು ನೆರೆಹೊರೆಯ ಹೊಲಗಳಿಗೆ ಕಳಿಸಲ್ಪಡುವರೆಂಬ ಸುದ್ದಿಯು ಒಂದು ರಾತ್ರಿ ಮೋನಳ ಕಿವಿಯ ವರೆಗೂ ಬಂದಿತು. ಅದರಂತೆ ಮುಂಜಾನೆ ಕಾವಲುಗಾರರೊಡನೆ ಕೆಲವು ಕೈದಿಗಳು ಮಹಾದ್ವಾರದ ಹೊರಗೆ ಹೋಗುವದೂ ಅವಳ ದೃಷ್ಟಿಗೆ ಬಿದ್ದಿತು.

'ಇಂಥ ನರಪಶುಗಳನ್ನು ನಂಬಲಾಗದು. ಇದರಿಂದ ತೊಂದರೆ ಯುಂಟಾಗದಿರದು' ಎಂದು ಮೋನಳು ಮುಂಜಾಗ್ರತೆಯನ್ನು ತಳೆದಿದ್ದಳು.

ಒಂದು ತಿಂಗಳೊಳಗಾಗಿಯೆ, ಕ್ಯಾಂಪಿನ ತುಂಬೆಲ್ಲ ಹೇಸಿಗೆಲಸ, ನಿಂದೆ, ಚಾಡಿಗಳ ಸುರಿಮಳೆಯಾಗಹತ್ತಿತು. ಕೈದಿಗಳಿಗೆ ಬರುವಂಥ ಎಲ್ಲ ಪತ್ರಗಳು ಆಕ್ಷೇಪಕ ಅಧಿಕಾರಿಗಳಿಂದ ತಪಾಸಿಸಲ್ಪಟ್ಟೇ ಅವರವರಿಗೆ ಮುಟ್ಟಿಸಲ್ಪಡುತ್ತಿದ್ದುವು. ಕೆಲವು ಪತ್ರಗಳು ಅವರ ದೇಶದಲ್ಲಿರತಕ್ಕ ಆಪ್ತೇಷ್ಟರವು ಇರುತ್ತಿದ್ದುವು; ಮತ್ತೂ ಕೆಲವು, ಹಿಂದಕ್ಕೆ ಈ ಪಶುಗಳೊಡನೆ ಕೂಡಿ ಕೆಲಸ ಮಾಡುತ್ತಿರುವ ಕಾಲಕ್ಕೆ ಸಂಭವಿಸಿದ ಬಳಕೆಯಿಂದ ಬರೆವಂಥ ಮಾಂಕ್ಸ ಹುಡುಗಿಯರ ಪತ್ರಗಳೂ ತಲೆದೋರಹತ್ತಿದವು. ಇಂಥ ಹುಡುಗಿಯರಲ್ಲೊಬ್ಬಳಾದ ಲಿಝೀಕಿನ್ನಿನಾ ಎಂಬವಳ ಪತ್ರವೊಂದು ಬಂದಿದೆ. ತನ್ನ ಯಜಮಾನನ ಹೆಂಡತಿಯು ತನ್ನನ್ನು ಹೊರಗೆ ಹಾಕಲಿರುವವಳಿದ್ದುದರಿಂದ ತಾನು ವಿಪರೀತ ತೊಂದರೆಯಲ್ಲಿ ಸಿಕ್ಕಿರುವದನ್ನು ತನ್ನ ಜರ್ಮನ್ನ ಪ್ರಿಯಕರನಿಗೆ ತಿಳಿಸಬೇಕೆಂದು ಅದರಲ್ಲಿ ಬರೆದಿದ್ದಿತು. ತನ್ನ ಅಣ್ಣನ ಪ್ರೇಯಸಿಯು ಇಂಥ ಹೀನಸ್ಥಿತಿಗಿಳಿದುದನ್ನು ತಿಳಿದು ಮೋನಳಿಗೆ ವಿಪರೀತವಾಗಿ ಕೆಟ್ಟೆನಿಸಿತು.

ಮೋನಳ ಸಿಟ್ಟು ಮೇರೆದಪ್ಪಿತು. ಕುಲಗೇಡಿ! ತನ್ನ ಅಣ್ಣನೂ ಯುದ್ಧಕ್ಕೆ ಹೋಗಿ, ತೀರಿಯೂ ಬಿಟ್ಟಿದ್ದಾನೆ. ಇಂಥ ಹೊತ್ತಿನಲ್ಲಿ ಅವಳು ಇಂಥ ಹೊಲ ಕೆಲಸ ಮಾಡಿದ್ದಾಳೆ. ಇಂಥವರ ವಿಷಯಕ್ಕೆ ಮೋನಳಿಗೆ

ಎಳ್ಳಷ್ಟೂ ಕಸಿಕರವು ಹುಟ್ಟುವದು ಸಾಧ್ಯವೇ ಇಲ್ಲ. ಅವರವರ ಮನೆಯ ಗಂಡಸರು ಯುದ್ಧದಲ್ಲಿ ಸಾಯಗೆದುರಾಗಿ ರಣೋತ್ಸಾಹದಿಂದ ಹೋರಾಡುತ್ತಿರುವಲ್ಲಿ, ಅವರ ಮನೆಯ ಹೆಂಗಸರು ಈ ಸರಾಧಮರೊಡನೆ ಸರಸ-ಸಲ್ಲಾಪಗಳಿಂದ ಕಾಲ ಕಳೆಯುವರು! ತನಗೆ ಎಂಥ ಕೆಟ್ಟ ಹೆಸರು ಬಂದರೂ ಚಿಂತೆಯಿಲ್ಲ—ಇಂಥ ಹೆಂಗಸರನ್ನು ಗೊತ್ತಿಗೆ ಹಚ್ಚಲೇಬೇಕು! ತನಗೆ ಶಿಕ್ಷಿಸುವ ಅಧಿಕಾರವಿದ್ದುದಾದರೆ ನಡುಬೀದಿಯಲ್ಲಿ ಅವರ ಚರ್ಮ ಸುಲಿಸುತ್ತಿದ್ದೆನೆನ್ನುವಷ್ಟು ಅವಳ ಕ್ರೋಧವು ಅತಿರೇಕಕ್ಕೆ ಮುಟ್ಟಿಬಿಡುವುದು.

ಅಂದಿನಿಂದಂತೂ ಮೋನಳ ತಿರಸ್ಕಾರವು ಅತೀವ ಹೆಚ್ಚಾಯಿತು. ಜರ್ಮನ್ನರ ಮುಖವನ್ನು ಕೂಡ ನೋಡಲು ಅವಳಿಗೆ ಸಹಿಸದಾಯಿತು. ಜರ್ಮನ್ನರ ಧ್ವನಿಯನ್ನು ಕೂಡ ಕೇಳಲು ಅವಳಿಂದ ಆಗದೆ ಹೋಯಿತು. ಇಷ್ಟಾದರೂ ಅವಳು ಮಾಡುವದಾದರೂ ಏನು? ತಂದೆಯ ಸಲುವಾಗಿ ಅವರ ಮಧ್ಯದಲ್ಲಿದ್ದುಕೊಂಡು ಹಾಲು ಪೂರೈಸಿ ಅವರನ್ನು ಪೋಷಿಸುವ ಹೊತ್ತು ಅವಳಿಗೆ ಪ್ರಾಪ್ತವಾಗಿತ್ತು. ದಿನಕ್ಕೆರಡು ಸಲ ಅವರ ಮುಖ ದರ್ಶನ ಮಾತ್ರ ಅವಳಿಗೆ ತಪ್ಪದ ಮಾತಾಗಿತ್ತು.

ವರುಷದ ಕೊನೆಯ ಭಾಗದ ಒಂದು ದಿನ ಬೆಳಗು ೭ ಗಂಟೆ. ಅವಳು ಬೇರೆಬೇರೆ ಕಂಪೌಂಡಿನ ಜನರಿಗೆ ಕೊಡಬೇಕಾದ ಅಳತೆಗಳಂತೆ ಹಾಲನ್ನು ಅಳೆದಳೆದು ಹಾಲಿನ ಪಾತ್ರೆಗಳನ್ನು ತುಂಬಿ ಕೊಡುತ್ತಿದ್ದಳು. ಕೈದಿಗಳು ಬಂದು ತಂತಮ್ಮ ಪಾತ್ರೆಗಳನ್ನು ತೆಗೆದುಕೊಂಡು ಹೋಗುವಾಗ ನಮಸ್ಕಾರ ಮಾಡಿ ಹೋಗುತ್ತಿದ್ದರೂ ಇವಳು ಅದನ್ನು ಕಣ್ಣೆತ್ತಿ ಸಹ ನೋಡುತ್ತಿದ್ದಿಲ್ಲ. ಅಂಥವರೆಲ್ಲರೂ ಹೋದ ಮೇಲೆ, ಮೂರನೆಯ ಕಂಪೌಂಡಿನ ಪಾತ್ರೆಯೊಂದು ಮೊದಲಿಟ್ಟ ಸ್ಥಳದಲ್ಲಿಯೇ ಇದ್ದುದು ಮೋನಳ ದೃಷ್ಟಿಗೆ ಬಿದ್ದಿತು. ಯಾರು ಬಂದಿಲ್ಲೆಂದು ನೆನಪುಮಾಡಿಕೊಳ್ಳ ಹತ್ತಿದ್ದಳು.

ಅಷ್ಟರಲ್ಲಿ ಅವಳಿಗೆ ಬಾಡಿದ ಮೊಗದ, ಕೆಮ್ಮು ಹತ್ತಿದ ಹುಡುಗನೊಬ್ಬನು ಕಟ್ಟಕಡೆಗೆ ಬರುತ್ತಿದ್ದನೆಂಬುದು ನೆನಪಾಯಿತು. ಕೆಲ ನಿಮಿಷ

ಗಳ ತರುವಾಯ ಅವಳು ಬಾಗಿಲದ ಕಡೆಗೆ ಹೊರಳಿ ನೋಡಿದಳು. 'ಇದು ನನ್ನದೇ' ಎಂಬ ಧ್ವನಿಯು ಕೇಳಬಂದಿತು.

ಅವಳು ಬೆದರಿದಳು. ಆ ಧ್ವನಿಯೊಳಗಿನ ಶಕ್ತಿಯೊಂದು ಇವಳ ಮನಸ್ಸನ್ನು ಅದೇಕೋ ಸೆಳೆದುಬಿಟ್ಟಿತು. ಉಳಿದ ಕತ್ತೆಗಳ ಕೂಗಿನ ಧ್ವನಿಯಂತೆ ಅದು ಇರಲಿಲ್ಲ; ಮೃದು—ಮಧುರವಾದ ಮಾನವ ಪ್ರಾಣಿಯ ಧ್ವನಿಯಂತೆ ಕೇಳಿಸಿತು. ರಾಜಿಯ ಧ್ವನಿಯೇ ಇರಬಹುದೆಂದು ಅವಳಿಗೆ ಕ್ಷಣ ಹೊತ್ತು ಭಾಸವಾಯಿತು.

ಅವಳು ಕಣ್ಣು ಹೊರಳಿಸಿದಳು. ಅವನು ಇವಳ ಕಣ್ಣಿಗೆ ಇದುವರೆಗೆ ಬಿದ್ದಿರಲಿಲ್ಲ. ಹೊಸ್ತಿಲದಲ್ಲಿ ನಿಂತಿದ್ದಾನೆ. ಅವನಿಗೆ ಸುಮಾರು ಮೂವತ್ತು ವರುಷಗಳಾಗಿರಬಹುದೆಂದು ಮುಖಲಕ್ಷಣಗಳೇ ಹೇಳುತ್ತಿದ್ದವು. ಎತ್ತರವಾದ ಆಳು. ಮಾಟವಾದ ಮೈಕಟ್ಟು. ಸುಂದರವಾದ ಉಂಗುರಗೂದಲು. ಬೆರಗುಗಣ್ಣುಗಳು. ಉಕ್ಕಿ ಬರುವ ತಾರುಣ್ಯ. ಇಂಥವನು ಚರ್ಮನ್ನನಿರುವುದು ಸಾಧ್ಯವೇ ಎಂಬ ಸಂಶಯವು ಅವಳ ತಲೆಯಲ್ಲಿ ಸುಳಿದಿತು.

'ನೀನು ಯಾರು?' ಎಂದು ಮೋನಳು ವಿಚಾರಿಸಿದಳು.

'ಕಡೆಗೆ ಹಾಲನ್ನು ಒಯ್ಯಲು ಬರುವಂಥ ಹುಡುಗನ ಕಾಲಚವು ಇಂದು ಮುಂಜಾನೆ ಒಡೆಯಿತು. ಅವನನ್ನು ಆಸ್ಪತ್ರಿಗೆ ಒಯ್ದಿರುವರು' ಎಂದು ಆ ಹೊಸಬನು ಹೇಳಿದನು.

'ಅದೆಲ್ಲ ಇರಲಿ, ನಿನ್ನ ಹೆಸರೇನು?'

'ಓಸ್ಕಾರ್ ಹಾಯಿನ್'

'ಯಾವ ಕಂಪೌಂಡು?'

'ಮೂರನೆಯ ಕಂಪೌಂಡು' ಎಂದು ಉತ್ತರ ಬಂದಿತು.

ಕ್ಷಣಹೊತ್ತು ಮೋನಳು ಅವನನ್ನು ಶಾಂತಿಸಮಾಧಾನಯುಕ್ತ ನೋಟದಿಂದ ನೋಡಿ 'ಹೌದು, ಅದು ನಿನ್ನದು' ಎಂದು ಬೆರಳುಮಾಡಿ ತೋರಿಸಿ, ಸ್ಮೃತಿಯ ಮೇಲೆ ಬಂದವರಂತೆ ಮಾತನಾಡಿದಳು.

ಆ ತರುಣನು ತನ್ನ ಟೊಪ್ಪಿಗೆಯನ್ನು ತೆಗೆದು 'ಉಪಕಾರವಾಯ್ತು' ಎಂದು ಹಾಲಿನ ಪಾತ್ರೆಯನ್ನು ತೆಗೆದುಕೊಂಡು ಹೊರಟನು.

ಮೋನಳು ಅವನಿಗೆ ಉತ್ತರಕೊಡಬೇಕೆಂದಳು; ಆದರೆ ಮನವು ಒಪ್ಪಲಿಲ್ಲ. ಅವನು ತನ್ನ ಪಾತ್ರೆಯನ್ನು ತೆಗೆದುಕೊಂಡು ಕಾವಲುಗಾರನ ಮುಂದೆ ಸಾಗಿದನು. ಅವಳು ಮನೆಯ ಬಾಗಿಲ ಮುಂದೆ ನಿಂತು ಅವನನ್ನು ಮರೆಯಾಗುವವರೆಗೆ ನೋಡಿಯೇ ನೋಡಿದಳು. ಹಾಲನ್ನಿರಿಸುತ್ತಿದ್ದ ಮನೆಯ ಕಿಡಿಕಿಗೆ ಹೋಗಿ ನಿಂತು, ಅಲ್ಲಿಂದಲೂ ನೋಡುತ್ತ ನಿಂತಳು. ಬಲು ದೂರ ಅವನು ಕಾಣುತ್ತಿದ್ದನು; ಮರೆಯಾಗುವವರೆಗೆ ಅರಳಿಸಿದ ಕಣ್ಣನ್ನು ಅವಳು ಮಿಳುಕಿಸಲಿಲ್ಲ.

ಅಂದಿನ ದಿನವೆಲ್ಲ ಅವಳು ಗಂಭೀರಮುಖವವಳಾಗಿ ಕೆಲಸದಲ್ಲಿ ತೊಡಗಿದಳು. ಆಳುಗಳು ಮಾಡಿದ ಸಣ್ಣಪುಟ್ಟ ತಪ್ಪುಗಳನ್ನು ಈವರೆಗೆ ಲಕ್ಷಿಸದ ಅವಳು, ಇಂದು ಸುಮ್ಮಸುಮ್ಮನೆ ಅವರ ಮೇಲೆ ಹರಿ ಹಾಯ್ದಳು. ರಾತ್ರಿಯ ಊಟವಾದೊಡನೆ ಬೈಬಲ್ಲನ್ನು ಓದಲು ತಂದೆಯು ಅವಳನ್ನು ಕರೆದರೆ 'ಇಂದು ಓದುವದು ಬೇಡ. ನನಗೆ ವಿಪರೀತ ತಲೆಶೂಲಿ' ಎಂದು ನೆವನನ್ನು ಮುಂದೆ ಮಾಡಿ, ತನ್ನ ಮನೋವ್ಯಗ್ರತೆಯನ್ನು ಹೊರಗೆ ತೋರಗೊಡಲಿಲ್ಲ.

ಅಂದಿನ ರಾತ್ರಿ ಅವಳೊಬ್ಬಳೆ ಅಗ್ಗಿಷ್ಟಿಗೆ ಮುಂದೆ ಕುಳಿತು ಕೊಂಡಳು. ಬೆಳ್ಳಂಬೆಳಗೂ ಕಣ್ಣಿಗೆ ಕಣ್ಣು ಹಚ್ಚಲಿಲ್ಲ. ಆ ಪ್ರಥಮ ದರ್ಶನ, ಆ ಆಕರ್ಷಣಗಳಿಂದ ಅವಳ ಮನಃಕಾಸಾರವು ಕದಡಿ ಕಲಕ ಮಲಕಾಗಿತ್ತು.

---

# ಕರಗಿದ ಕಲ್ಲೆದೆ

ಮತ್ತೊಂದು ತಿಂಗಳು ಕಳೆಯಿತು. ಮೋನಳು ಈಗ ತನ್ನೊಡನೆಯೇ ಒಂದು ದೊಡ್ಡ ಯುದ್ಧವನ್ನು ಹೂಡಿಕೊಂಡು ಹೋರಾಡುತ್ತಿದ್ದಾಳೆ. ಅವಳ ಹೃದಯವನ್ನು ದುಷ್ಟಪಿಶಾಚಿಯು ಆಕ್ರಮಿಸಿದಂತಾಗಿ ದಿನಾಲೂ ಅದರೊಡನೆ ಅವಳಿಗೆ ಗುದ್ದಾಡಬೇಕಾಗಿದೆ.

'ಅದು ನಿಜವಾಗಲಾರದು! ಅದು ಅಸಾಧ್ಯವಾದುದು! ನನ್ನನ್ನು ನಾನೇ ಹಳಿದುಕೊಳ್ಳಬೇಕು' ಎಂದು ಅವಳ ವಿಚಾರಲಹರಿಯು ಸಾಗಿತ್ತು.

ತಂದೆಯು ಆರೈಕೆಯಲ್ಲಿ ವೆಚ್ಚಮಾಡುವ ಕಾಲವನ್ನು ಬಿಟ್ಟು, ಉಳಿದೆಲ್ಲ ಹೊತ್ತನ್ನು ಅವಳು ಗುಪ್ತವೈರಿಯಿಂದ ತನ್ನನ್ನು ರಕ್ಷಿಸಿಕೊಳ್ಳಲು ಕಳೆಯುತ್ತಿದ್ದಳು. ಜರ್ಮನ್ನರ ವಿಷಯದಲ್ಲಿ ಮುದುಕನ ಮನಸು ತೀರ ಕೆಡುತ್ತ ನಡೆದಿದೆ; ಮಗನನ್ನು ಕೊಂದ ಜಾತಿಯವರನ್ನು ಅವನೆಂದಿಗೂ ಕ್ಷಮಿಸಲಾರನು.

'ದೇವರು ಅವತರಿಸಿ ವೈರಿಗಳನ್ನು ಸಂಹರಿಸಲಿ. ದುಷ್ಟರ ಇಚ್ಛೆಯು ಕೈಗೂಡದಿರಲಿ. ಅವರನ್ನು ಬೆಂಕಿಯ ಕುಣಿಯಲ್ಲಿಕ್ಕಲಿ. ಮರಳಿ ತಲೆಯೆತ್ತದಂತೆ ಮಾಡಲಿ' ಎಂದು ಮುದುಕನು ಬಡಬಡಿಸುವದು ಅವರಿಬ್ಬರೂ ಮಲಗುವ ಕೋಣೆಗಳ ನಡುವಿರುವ ಗೋಡೆಯೊಳಗಿಂದ ಕೇಳಬಂದಿತು. ಅವಳಾದರೂ ಅವನು ಬಡಬಡಿಸಿದಂತೆ ಅನ್ನಬೇಕೆಂದಿದ್ದಳು; ಆದರೆ ಆ ಡೇವಿಡ್ಡನು ಈ ರೀತಿ ಅನ್ನುತ್ತಿದ್ದಾಗ 'ದೇವರ ಅಂಶಾವತಾರವಾದ ಮನುಷ್ಯನಿರಲಿಲ್ಲ—ಕೇವಲ ಬ್ರಹ್ಮರಾಕ್ಷಸನಾಗಿರಬೇಕು' ಎಂಬ ಕಲ್ಪನೆಯು ಅವಳಲ್ಲಿ ಮೂಡಿದ್ದರೂ ಮೂಡಿರಬಹುದು.

ಅವಳು ಇದಕ್ಕೆ ಅಂಜಿದಳು: ಕೈದಿಗಳಿಗೆ ಸಾಧ್ಯವಿದ್ದಷ್ಟು ಕಠೋರಳಾಗಲು ತನ್ನ ಮನಸ್ಸನ್ನು ಗಟ್ಟಿಮಾಡಲು ಯತ್ನಿಸಬೇಕೆಂದಳು. ಹಾಲಿಗಾಗಿ ಓಸ್ಕಾರನು ಉಳಿದ ಕೈದಿಗಳೊಡನೆ ಬಂದರೆ ಅವಳು ಅವನನ್ನೆಂದೂ ಕಣ್ಣೆತ್ತಿ ನೋಡುತ್ತಿದ್ದಿಲ್ಲ. ಅವನು ಮಾತನಾಡದ ಮುಗದಯ್ಯ. ಒಂದು ವೇಳೆ ಅವನು ಮಾತನಾಡಿದರೆ, ಮೋನಳು ನೋರೆ

ಯನ್ನು ತಿರುವಿ, ಅವನನ್ನುವದನ್ನು ಕೇಳುತ್ತಲೇ ಇರಲಿಲ್ಲ. ಆದರೆ ಒಂದು ದಿನ, ಅವಳು ಬಲವಂತದಿಂದ ಅವನ ಮಾತನ್ನು ಕೇಳಲೇಬೇಕಾಗಿ ಬಂತು.

'ಲಡ್‌ವಿಗ್ಗನು ಹೋ. . . . ದ. . . . ನು'

'ಲಡ್‌ವಿಗ್? ಅಂದರೆ ಯಾರು?'

'ಹಾಲಿಗಾಗಿ ಕಟ್ಟೆಕಡೆಗೆ ಬರುತ್ತಿದ್ದನಲ್ಲ—ಅವನು.'

'ಕೆಮ್ಮುತ್ತ ಬರುತ್ತಿದ್ದನಲ್ಲ—ಅವನೆ?'

'ಅಹುದು. ರಾತ್ರಿಯೇ ತೀರಿಕೊಂಡನು; ನಾಳೆ ಹೂಳುವ ವಿಧಿ ಯಾಗುವದು. ಪಾಪ! ಇದೀಗ ಇಪ್ಪತ್ತೆರಡು ವಯಸು. ಎಳೆ ಜೀವನ. ವಿಧವೆಯಾದ ತಾಯಿಗೆ ಇವನೊಬ್ಬನೇ ಮಗನು. ನಾನು ಅವಳಿಗೆ ಸುದ್ದಿ ಯನ್ನು ತಿಳಿಸಬೇಕಾಗಿದೆ. ಅವಳ ಜೀವವು ನೆತ್ತಿಯಿಂದ ಹೋಗಬಹುದು' ಎಂದು ಓಸ್ಕಾರನು ಕಳವಳಪಡುತ್ತ ಹೇಳಿದನು.

ಅವಳ ಕಂಠದಲ್ಲಿ ಉಸಿರು ಸರಿಯಾಗಿ ಬಾರದಾಯಿತು. ಕಣ್ಣು ನೀರಿನಿಂದ ತುಂಬಿದವಾದರೂ 'ಅವಳೊಬ್ಬಳೇ ಅಲ್ಲ—ಈ ಜಗತ್ತಿನಲ್ಲಿ ಮಗನನ್ನು ಕಳೆದುಕೊಂಡವಳು—ಬೇಕಾದಷ್ಟು ಜನರಿದ್ದಾರೆ. ಯಾರು ಯುದ್ಧವನ್ನು ಹೂಡುವರೋ ಅವರೇ ಅಂಥವರಿಗಾಗಿ ಮರುಗಬೇಕು' ಎಂದು ಗಟ್ಟಿಮನಸುಮಾಡಿ ಅವಳು ಮರುಮಾತನಾಡಿದಳು.

ಓಸ್ಕಾರನು ಜಣಹೊತ್ತು ಅವಳನ್ನು ನೋಡಿ ಮತ್ತೇನೂ ಮಾತ ನಾಡದೆ ಅಲ್ಲಿಂದ ಹೊರಟುಬಿಟ್ಟನು. ಹೋಗಹೋಗುತ್ತ ಅವನು ಅವ ಳನ್ನು ನೋಡಬೇಕೆಂದು ಹೊರಳಿ ನಿಲ್ಲುವಷ್ಟರಲ್ಲಿ, ಅವಳು ಕಿಡಿಕಿಯೊಳ ಗಿಂದ ಅವನನ್ನೇ ನೋಡುತ್ತ ನಿಂತಿದ್ದಳೆಂಬುದು ಅವನಿಗೆ ಸ್ಪಷ್ಟವಾಗಿ ಕಂಡುಬಂದಿತು.

'ದೇವರೇ, ನನ್ನನ್ನು ಕ್ಷಮಿಸು! ಕ್ಷಮಿಸು!' ಎಂದು ವಿಚಾರ ಮಾಡಿ, ಅವಳು ತನ್ನನ್ನು ತಾನೇ ಶಿಕ್ಷಿಸಿಕೊಳ್ಳಬೇಕೆಂದು ಪಶ್ಚಾತ್ತಾಪ ಪಟ್ಟುಕೊಂಡಳು.

ಮುಂದೆ ಒಂದು ವಾರವು ಕಳೆದ ಮೇಲೆ, ಒಂದು ಸಣ್ಣ ಕಟ್ಟಿಗೆಯ ಪೆಟ್ಟಿಗೆಯನ್ನು ಹಿಡಿದುಕೊಂಡು ಓಸ್ಕಾರನು ವಾಡಿಕೆಯಂತೆ ಬಂದು

ಅದನ್ನು ಮೋನಳ ಮನೆಯ ಬಾಗಿಲದೊಳಗಿರಿಸಿದನು. ಲಡ್‌ವಿಗ್ಗನ ತಾಯಿಯು ಅದನ್ನು ಕಳಿಸಿಕೊಟ್ಟಿದ್ದಳು. ಕೃತ್ರಿಮ ಹೂಗಳಿಂದ ತಯಾರಿಸಿದ ಕಾಜಿನ ಗುಮ್ಮಟವು ಅದರಲ್ಲಿದೆ. ಸತ್ತವರ ಸಮಾಧಿಯ ಮೇಲೆ ಇಂಥದನ್ನಿಡುವುದು ಜರ್ಮನ್ನರ ರೂಢಿಯು. 'ಲಡ್‌ವಿಗ್ಗನ ಸಮಾಧಿಯ ಮೇಲೆ ಇದನ್ನು ಇರಿಸಬೇಕೆಂದು ಅವನ ತಾಯಿಯು ನನಗೆ ಬಿನ್ನವಿಸಿಕೊಂಡಿದ್ದಾಳೆ; ಆದರೆ ನಾನು ಅದನ್ನೊಯ್ದು ಹೇಗೆ ಇಡಲಿ? ಮಹಾದ್ವಾರದ ಹೊರಗೆ ಹೋಗಲು ನನಗೆ ಅಪ್ಪಣೆಯೇ ಸಿಗುವದಿಲ್ಲ' ಎಂದು ಮಾತುಗಳನ್ನು ಅರ್ಧಕ್ಕೇ ಮುಗಿಸಿದನು.

ಪೆಟ್ಟಿಗೆಯನ್ನು ತೆರೆದು ಒಳಗಿನ ಕಾಜಿನ ಗುಮ್ಮಟವನ್ನು ತೋರಿಸಬೇಕೆಂದು ಅವನು ಮುಚ್ಚಳವನ್ನು ತೆರೆದನು. ಅದಕ್ಕೆ ಶಾಸನವೊಂದು ಅಂಟಿಸಲಾಗಿತ್ತು. ಮೋನಳು ಅದನ್ನು ನೋಡಬೇಕೆಂದು ಬಾಗಿದಳು. ಜರ್ಮನ್ನ ಭಾಷೆಯಲ್ಲಿ ಬರೆದಿತ್ತು.

'ಏನು ಬರೆದಿದೆ?' ಎಂದು ವಿಚಾರಿಸಿದಳು.

'ತಾಯಿಯ ಚಿರಂತನ ಪ್ರೀತಿಯ ಗುರುತು'—ಎಂದು ಓದಿ ಹೇಳಿದನು.

ಮೋನಳಿಗೆ ಎದೆಯಲ್ಲಿ ಚೂರಿಯು ನಟ್ಟಂತೆನಿಸಿತು; ಆದರೂ ಗಡಿಬಿಡಿಯಿಂದೆದ್ದು 'ನೀನು ಅದನ್ನು ಇಲ್ಲಿಂದೊಯ್ಯಬೇಕು. ಅದರಿಂದ ನನಗೇನಾಗಬೇಕಾಗಿದೆ' ಎಂದು ಅಂದಳು. ಓಸ್ಕಾರನು ಅದನ್ನು ಅಲ್ಲಿಯೇ ಬಿಟ್ಟು ಹೊರಟನು. ಅವಳು ತನ್ನ ಇಚ್ಛೆಯಂತೆ ಮಾಡಬಹುದೆಂದು ಅವನು ಭಾವಿಸಿರಬಹುದು.

ಇಡಿಯ ದಿನವೆಲ್ಲ ಅದನ್ನು ನೋಡಬಾರದೆಂದು ಅವಳು ನಿರ್ಧರಿಸಿದ್ದರೂ, ಅವಳ ಕಣ್ಮುಂದೆಯೇ ಅದು ಕಟ್ಟಿದಂತಾಗಿತ್ತು. ಸಂಜೆಯ ಮುಂದೆ, ಆ ಪೆಟ್ಟಿಗೆಯನ್ನು ತೆಗೆದುಕೊಂಡು ತನ್ನ ಗೌನಿನ ಕಿಸೆಯಲ್ಲಿರಿಸಿ ಮಹಾದ್ವಾರದ ಕಡೆಗೆ ಸಾಗಿದಳು. 'ಅದು ನನ್ನ ಕಣ್ಣೆದುರಿನಲ್ಲಿ ಬೇಡ' ಎಂದು ವಿಚಾರಮಾಡುತ್ತ ಕರ್ಕಪ್ಯಾಟ್ರಿಕ್ ದೇವಾಲಯವನ್ನು ಪ್ರವೇಶಿಸಿದಳು.

ಅವಳಿಗೆ ಸ್ಥಳವನ್ನು ಹುಡುಕುವದು ಕಠಿಣವಾಗಲಿಲ್ಲ. ಉಳಿ

ದೆಷ್ಟೋ ಜರ್ಮನ್ನರು ತೀರಿಕೊಂಡಿದ್ದರು. ಅವರನ್ನೂ ಇಲ್ಲಿಯೇ ಹೂಳ ಲಾಗಿತ್ತು. ಆಯಾ ಸಮಾಧಿಗಳ ಮೇಲೆ ಅವರವರ ಜರ್ಮನ್ನ ಹೆಸರು ಗಳನ್ನು ಕೆತ್ತಿಸಿದ ಬಿಳಿಯ ಸಂಗಮರವರಿಯ ಕಲ್ಲುಗಳು ನಿಲ್ಲಿಸಲ್ಪಟ್ಟಿವೆ. ಕೊನೆಯ ಸಮಾಧಿಯ ಮೇಲೆ ಬರೆಹದ ಕಲ್ಲಿರಲಿಲ್ಲ. ಅವಳು ಆ ಹೂಗಳನ್ನು ಅದರ ಮೇಲೆ ಹರಪಿ ಆ ಪೆಟ್ಟಿಗೆಯನ್ನು ಅಲ್ಲಿಯೇ ಬೀಸಾಡಿದಳು.

'ಏನೇ ಆದರೂ—ಇದು ಭೂತದಯೆ, ಇದಕ್ಕಾಗಿ ನನ್ನನ್ನು ಯಾರೂ ದೂಷಿಸಲಾರರು' ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡಳು. ಆದರೆ ಆ ಜರ್ಮನ್ನ ಹುಡುಗನ ತಾಯಿಯು ಇಲ್ಲಿ ತೀರಿಕೊಂಡ ಮಗನ ಸಲುವಾಗಿ ಎಷ್ಟು ಪ್ರಲಾಪಿಸಿರಬಹುದೆಂಬ ಕಲ್ಪನೆ ಮಾತ್ರ ಅವಳನ್ನು ವಿಹ್ವಲಗೊಳಿಸಿತು. ತಾಯಿಯ ಕರುಳು ಎಷ್ಟು ಬೆಂದಿರಬೇಕೆಂಬ ವಿಚಾರ ದಲ್ಲಿ ಅವಳು ಗುಂಗಾಗಿದ್ದಳು. ಹಿಂಬದಿಯಿಂದ ಕುದುರೆಯ ಖುರಪುಟ ಧ್ವನಿಯು ಕೇಳಬಂದಿತು. ಕುದುರೆಯ ಸವಾರನು ಅವಳ ಹತ್ತಿರ ಬಂದೊ ಡನೆ ಕುದುರೆಯನ್ನು ನಿಲ್ಲಿಸಿ, ಅವಳೊಡನೆ ಮಾತನಾಡಹತ್ತಿದನು. ತನ್ನ ದೈನಂದಿನ ಪದ್ಧತಿಯಂತೆ ಸವಾರಿ ಹೊರಟಂಥ ಕಮಾಂಡಂಟನೇ ಎಂಬು ದನ್ನರಿತು ಅವಳೂ ಉತ್ತರಕೊಡುತ್ತಿದ್ದಳು. ಎಲ್ಲಿಗೆ? ಯಾತಕ್ಕೆ? ಅವಳು ಹೋಗಿದ್ದಳೆಂಬುದನ್ನು ಅವನು ಕೇಳಿದನು. ಅದಕ್ಕವಳು ನಿಜವಾದ ಸಂಗತಿಯನ್ನು ಇದ್ದಕ್ಕಿದ್ದಂತೆ ಅವನ ಮುಂದೆ ಧೈರ್ಯವಾಗಿ ಹೇಳಿದಳು. 'ಈ ಜನರಲ್ಲಿಯ ಕೆಲವರಿಗಾಗಿ ನೀನು ಕಳವಳ ಪಡುತ್ತಿರುವದು ಸ್ವಾಭಾವಿಕವು; ಆದರೆ ನಿನ್ನ ಮುದುಕ ತಂದೆಯ ಅಭಿಪ್ರಾಯದಂತೆ ನಡೆ ಯುವದೊಳಿತು. ಇದಕ್ಕೂ ಮುಂದಿನ ಹೆಜ್ಜೆಯನ್ನು ತುಳಿಯಬೇಡ' ಎಂದು ಗಂಭೀರ ಭಾವನೆಯಿಂದ ಆ ಕಮಾಂಡಂಟನು ಮೋನಳಿಗೆ ಉಪ ದೇಶಿಸಿದನು.

ಮೋನಳು ಕಮಾಂಡಂಟನ ಹಿತವಚನದಂತೆ ನಡೆಯಲು ಯತ್ನಿಸಿ ದಳು; ಆದರೆ ಹಾಗೆ ಮಾಡುವದರಿಂದ ತನ್ನ ಹೃದಯವು ತಲ್ಲಣಿಸುವ ದೆಂಬುದನ್ನು ಅವಳು ಬಲ್ಲಳು. ತಂದೆಯ ಹತ್ತಿರ ಕಳೆಯುವ ಕಾಲವು

ಕೂಡ ಅವಳನ್ನು ಶಾಂತಪಡಿಸಲು ಶಕ್ತವಾಗಲಿಲ್ಲ. ಇಷ್ಟರಲ್ಲಿ ಮುದುಕನಿಗೆ ತನ್ನ ಕೋಣೆಯಲ್ಲಿಯೇ ಕುರ್ಚಿಯ ಮೇಲೆ ಕುಳಿತುಕೊಳ್ಳುವಷ್ಟು ತ್ರಾಣವು ಬಂದಿತ್ತು. ನೆರೆಹೊರೆಯವರೂ ಅವನನ್ನು ಮಾತಾಡಿಸಬಹುದೆಂಬ ಅಪ್ಪಣೆಯು ದೊರೆತಿದ್ದಿತು. ಆ ಜನರಲ್ಲಿ ತೊದಲು ಮಾತಾಡುವವನೊಬ್ಬನು 'ಜನರನ್ನು ತುಂಬಿಕೊಂಡು ಬರುವ ದೊಡ್ಡ ಹಡಗವೊಂದು ವೈರಿಗಳ ಸಬ್ ಮರೀನದಿಂದ ಮುಳುಗಿಸಲ್ಪಟ್ಟಿದ್ದರಿಂದ ಸಾವಿರಕ್ಕಿಂತ ಹೆಚ್ಚು ಜನರು ಮರಣಕ್ಕೀಡಾದರು' ಎಂಬ ಸುದ್ದಿಯನ್ನು ಮುದುಕನ ಕಿವಿಗೆ ಹಾಕಿದನು.

ಮುದುಕನ ಸಿಟ್ಟು ಆಟೋಪವಿಹಾರಿ ಮೈನಡುಗಹತ್ತಿತು. 'ಈ ಅಧಮರನ್ನು ದೇವರು ಎಂದೆಂದಿಗೂ ಹಾಳುಮಾಡುತ್ತಿರಲಿ! ಆ ಸಬ್‌ಮರೀನದ ಕ್ಯಾಪ್ಟನ್ನನು ಜೀವಿಸದಂತೆಯಾಗಲಿ! ಮುಳುಗಿದವರ ಸಾಯುವ ಸಂಕಟವು ಅವನ ಆತ್ಮವು ನ್ಯಾಯಾಸನಕ್ಕೆ ಬರುವವರೆಗೆ ಅವನನ್ನು ಕಾಡಲಿ. ಆ ಮೇಲೆ ಕಡೆಯವರೆಗೂ ಅವನನ್ನು ನರಕಕ್ಕೆ ಗುರಿಮಾಡಲಿ' ಎಂದು ದ್ವೇಷವೇ ಮೂರ್ತಿಮಂತ ಮಾತಾಡುತ್ತಿರುವಂತೆ ಮುದುಕನು ಮಾತಿನ ಮಳೆಯನ್ನು ಸುರಿಸಿದನು.

'ತಂದೆಯೇ, ಶಾಂತನಾಗು. ಪಾಪಿಷ್ಠನು ಮರಣಹೊಂದಿದ ನಂತರ ಸೇಡಿಗಾಗಿ ಅವನನ್ನು ನರಕಕ್ಕೆ ಅಟ್ಟುವದು ಕ್ರಿಶ್ಚಿಯನ್ ಧರ್ಮಕ್ಕೆ ಅನುರೂಪವಾದೀತೆ?' ಎಂದು ಮೋನಳು ತಂದೆಯನ್ನು ವಿಚಾರಿಸಿದಳು. ಅದಕ್ಕವನಿಂದ ಉತ್ತರವು ದೊರೆಯಲಿಲ್ಲ.

ಬೇಸಿಗೆಯು ಬಂದು ಮುಂಚಾವು. ಕವನಾಂತಂಟನು ಮುದುಕನನ್ನು ಕಾಣಬಯಸಿ ಮನೆಗೆ ಬರಲು, ಅವಳು ಅವನನ್ನು ಅಟ್ಟದ ಮೇಲೆ ತಂದೆ ಮಲಗಿದ ಸ್ಥಳಕ್ಕೆ ಕರೆದೊಯ್ದಳು. ಅವನು ತನ್ನ ಕಿಸೆಯೊಳಗಿಂದ ಉತ್ತಮವಾದ ಚರ್ಮದ ಹೊದಿಕೆಯುಳ್ಳ ಪದಾರ್ಥವೊಂದನ್ನು ತೆಗೆದು ಮುಚ್ಚಳವನ್ನು ತೆರೆದನು.

'ಅದೇನು?' ಎಂದು ಮುದುಕನು ಪ್ರಶ್ನಿಸಿದನು.

'ರಾಬರ್ಟಕ್ರೇಅನ್ನನೇ, ಅದು 'ವ್ಹಿಕ್ಟೋರಿಯಾ ಕ್ರಾಸ್.' ನಿನ್ನ

ಮಗನು ಯುದ್ಧದಲ್ಲಿ ಅತ್ಯಂತ ಶೌರ್ಯವನ್ನು ತೋರಿಸಿದುದಕ್ಕಾಗಿ ಚಕ್ರವರ್ತಿಗಳು ಸಂತೋಷಪಟ್ಟು ಇದನ್ನು ಕಳಿಸಿಕೊಟ್ಟಿದ್ದಾರೆ.'

'ನನ್ನ ರಾಜಿಯೇ ಇಲ್ಲದಾಗ, ಅದನ್ನು ಯಾರು ಧರಿಸಬೇಕು' ಎಂದು ಕಣ್ತುಂಬ ನೀರು ತಂದು, ಮುದುಕನು ಮೆಲ್ಲನೆ ಮಾತನಾಡಿದನು. ತಾನು ಸೂಚಿಸುವ ಸಲಹೆಯು ಅನುಚಿತವಾಗಲಾರದೆಂದು ಭಾವಿಸಿ 'ನಿನ್ನ ಮಗಳು ಧರಿಸಿಕೊಳ್ಳಲಿ. ಅದರಲ್ಲೇನು?' ಎಂದು ಕಮಾಂಡಂಟನು ಮುದುಕನಿಗೆ ಪ್ರಶ್ನಿಸಿಕೊಂಡನು.

'ಹೌದು, ಹೌದು. ಅದೇಕೆ ಬೇಡ' ಎನ್ನುತ್ತ ಮೋನಳು ಅದನ್ನು ತೆಗೆದುಕೊಂಡು ತನ್ನ ಎದೆಯ ಮೇಲೆ ಅಣ್ಣನ ನೆನಪೆಂದು ಧರಿಸಿಕೊಂಡೇ ಬಿಟ್ಟಳು.

ಮರುದಿನ ಬೆಳಿಗ್ಗೆ ಎದೆಯ ಮೇಲೆ ಧರಿಸಿರುವ ಪದಕದಿಂದ ತನ್ನಲ್ಲಿ ಹೆಚ್ಚು ಶೌರ್ಯ-ಧೈರ್ಯಗಳು ಬಂದವರಂತೆ ಮೋನಳು ಹಾಲಿಗಾಗಿ ಬಂದಂಥ ಓಸ್ಕಾರನನ್ನು ಹೌಲಿನಿಂದ ನೋಡಿದಳು. ಅವನು ಅದನ್ನು ನೋಡಿ 'ಏನದು? ಎಲ್ಲಿಂದ ಬಂತು?' ಎಂದು ಅವಳನ್ನು ವಿಚಾರಿಸಿದನು.

ಅದು ಹೇಗೆ ದೊರೆತಿತೆಂಬ ವಿಷಯವನ್ನು ಅವಳು ಗೌರವದಿಂದ ವಿವರಿಸಿದಳು.

'ಯೋಗ್ಯತೆಗೆ ತಕ್ಕ ಗೌರವ' ಎಂದು ಓಸ್ಕಾರನು ಉದ್ಗಾರ ತೆಗೆದನು.

ಮೋನಳಿಗೆ ದುಃಖವು ಒತ್ತರಿಸಿತು. ಆ ಹೆಮ್ಮೆಯು ಮರೆಯಾಯಿತು. ಅಣ್ಣನ ನೆನಪಿನಿಂದ ಅವಳಿಗೆ ವಿಪರೀತ ದುಃಖವಾಗುವದು.

ವರ್ತಮಾನ ಪತ್ರಗಳಂತೂ ಬರುತ್ತಲೇ ಇವೆ. ವರ್ಣಿಸಲಸದಳವಾದ ಕ್ರೂರ ಹಿಂಸೆಗಳಿಗೇನು ಕೊರತೆಯಿಲ್ಲ. ಆ ವಾರ್ತೆಗಳ ಮಧ್ಯದಲ್ಲಿ, ಒಬ್ಬ ಇಂಗ್ಲಿಷ ಸೈನಿಕನು ತನ್ನ ಮನೆಯವರಿಗೆ ಬರೆದ ಪತ್ರವೊಂದು ಮೋನಳಿಗೆ ದೊರೆತಿತು. ಅದರಲ್ಲಿ ವೈರಿಗಳಲ್ಲೊಬ್ಬನು ತನಗೆ ಮಾಡಿದ ಉಪಕಾರವನ್ನು ಅವನು ವರ್ಣಿಸಿದುದು ಅವಳ ಕಣ್ಣಿಗೆ ಬಿದ್ದಿತು.

'ಬೆಲ್ಜಿಯಮ್ಮಿನ ರಣಾಂಗಣದಲ್ಲಿ ಗಾಯಗೊಂಡು ಜೀವಂತ ಶವವಾಗಿ

ಬಿದ್ದಿದ್ದನು. ಎಷ್ಟೋ ಹೊತ್ತಿನ ಮೇಲೆ ಅವನಿಗೆ ಸ್ಮೃತಿಯು ಬಂದಿತು. ಅರ್ಧ ಮೈಲುಗಳ ವರೆಗೆ ಜೀವವನ್ನುಳಿಸಿಕೊಳ್ಳಲು ಹೊಟ್ಟೆಹೊಸೆಯುತ್ತ ಸಾಗಿರಲು ಒಂದು ಚಿಕ್ಕ ಗುಡಿಸಲದಲ್ಲಿ ಮಂದ ಪ್ರಕಾಶವೊಂದು ಅವನಿಗೆ ಕಂಡುಬಂದಿತು. ಅಲ್ಲಿರುವ ಜರ್ಮನ್ನ ಮುದುಕನೊಬ್ಬನು ಇವನಿಗೆ ಆಶ್ರಯವನ್ನಿತ್ತು, ಮುಂಜಾನೆ ಓಡಿಹೋಗಲು ಸಹಾಯಮಾಡಿದನು. ಅಲ್ಲಿ ಸುತ್ತುಮುತ್ತಲೆಲ್ಲ ಕುಡಿದು ದುಂದಾದ ಅನೇಕಾನೇಕ ಜರ್ಮನ್ನರು ಗಲಾಟೆಯನ್ನು ನಡೆಯಿಸಿದ್ದರು. ಆದರೆ ಈ ಜರ್ಮನ್ನನು ಮಾತ್ರ ಅವನಿಗೆ ಜೀವದಾನ ಮಾಡಿದನು' ಎಂಬ ಸುದ್ದಿಯು ಪ್ರಕಟವಾಗಿತ್ತು.

ಓಸ್ಕಾರನ ವಿಷಯದಲ್ಲಿ ಬೆಳೆಯುತ್ತಿದ್ದ ಪ್ರೇಮಾದರಗಳಿಗೆ ಈ ಸುದ್ದಿಯು ಮೋನಳಿಗೆ ಪೋಷಕವಾಗಲು ದಾರಿಯಾಯಿತು. ಆ ಸುದ್ದಿಯನ್ನು ತಂದೆಯ ಮುಂದೆ ಓದಿ ತೋರಿಸಬೇಕೆಂದು ಮೇಲೆ ಹತ್ತಿ ಹೋದಳು.

'ಪ್ರತಿಯೊಂದು ಜಾತಿಯಲ್ಲಿಯೂ ಒಳ್ಳೆಯವರು, ಕೆಟ್ಟವರು ಇದ್ದೇ ಇರುವರು. ಆ ಜರ್ಮನ್ನನು ಪರೋಪಕಾರಿ ಜೀವಿ ಇರಲಿಕ್ಕೆ ಸಾಕು!' ಎಂದು ಮೋನಳೆಂದಳು. ಅದನ್ನು ಕೇಳಿ, ಮುದುಕನು ತುಟಿಗಳನ್ನು ಕಚ್ಚಿ ಸಿಟ್ಟಿನ ಭರದಿಂದ 'ಇರಬಹುದು, ಇದ್ದಿದ್ದಾನು. ಆದರೆ ಅವನು ನನ್ನ ಮಗನ ಹೃದಯದಲ್ಲಿ ಗುಂಡುನಾಟಿಸಿದ ಪಶುವಿನ ತಂದೆ ಇರಲಾರನೆಂದು ಯಾರು ಹೇಳಬಲ್ಲರು?' ಎಂದು ಒಂದೇ ಉಸುರಿನಿಂದ ಮುದುಕನು ಗುಡುಗಿದನು. ಮೋನಳು ಬೇರೆ ಬಗೆದಿದ್ದಳು. ಅದರ ಫಲವು ಮಾತ್ರ ವಿಪರೀತವಾಯಿತು.

ಮೋನಳು ಪತ್ರವನ್ನು ಅಲ್ಲಿಯೇ ಚೆಲ್ಲಿಕೊಟ್ಟು ಅಲ್ಲಿಂದ ಬಿರಬಿರನೆ ಹೊರಟಳು. ಅವಳು ಹೋದ ಮೇಲೆ ನಡುಗುವ ದನಿಯಲ್ಲಿ 'ಮಗಳೇ ನಿನಗೇನಾಗಿದೆ? ಏನೋ ಕೆಡಕು ಕಾದು ಕುಳಿತಿದೆ. ನಿನ್ನ ದೈವದಲ್ಲಿ ಏನೇನು ಭೋಗಿಸುವದಿದೆಯೋ ನಾನು ಹೇಳಲಾರೆ. ಅಂತೂ ನಿನಗೆ ಕೇಡು ಸಂಭವಿಸುವದು ಖಂಡಿತ' ಎಂದು ಮುದುಕನು ಬಾಯಲ್ಲಿಯೇ ಗುಣಗುಟ್ಟಿದನು.

---

# ರಾಬಿಯ ಗಡಿಯಾಳ

ಒಂದು ದಿನ ಸಸುಕು. ಮೋನಳಿಗೆ ತನ್ನ ಗುಪ್ತವೈರಿಯ ವಿಷಯ ದಲ್ಲಿ ಏನೋ ಒಂದು ತೆರದ ಅಂತರ್ಶಕ್ತಿಯು ತನ್ನಲ್ಲಿ ಬೆಳೆಯುಹತ್ತಿರುವ ದೆಂದು ಭಾಸವಾಗತೊಡಗಿದೆ.

ಮರಡಿಯ ಬದಿಯಲ್ಲಿರುವ ೪ನೇ ಕಂಪೌಂಡಿನಲ್ಲಿಯ ಒಬ್ಬ ಕೈದಿಯು ಗುಪ್ತಮಾರ್ಗವನ್ನು ಮಾಡಿ, ಅದರಿಂದ ಪಾರಾಗಿ ಓಡಿ ಹೋಗುವ ಹಂಚಿಕೆಯಲ್ಲಿದ್ದು, ಆದರಂತೆ ಒಂದು ಮಾರ್ಗವನ್ನು ತೋಡಿ ರುತ್ತಾನೆಂಬ ಅಪವಾದದ ಮೇಲೆ ಅವನನ್ನು ಕಾವಲಿನ ಸಿಪಾಯರು ಬಂಧಿಸಿದ್ದಾರೆ. ಕಮಾಂಡಂಟನ ಮುಂದೆ ಖಟ್ಲೆಯು ಬಂದಿತು; ಆದರೆ ಅವನು ಅದನ್ನು ಪೀಲ್ ಪಟ್ಟಣದಲ್ಲಿಯ ಸಿವ್ಹಿಲ್‌ಕೋರ್ಟಿಗೆ ಕಳಿಸಿದನು. ಈಗ ಕ್ಯಾಂಪಿನಲ್ಲಿ ಯಾವುದಕ್ಕೂ ತಕರಾರು ಮಾಡದಂಥ ವಾತಾವರಣ ವಿದ್ದರೂ ಈ ಕೃತಘ್ನ ಜರ್ಮನ್ನರು ಏನೇನೋ ನಡೆಯಿಸಿರುತ್ತಾರಲ್ಲ! ಇದಕ್ಕೇನನ್ನಬೇಕು?

ಮೋನಳು ಗಡಿಬಿಡಿಯಿಂದ ಕೋರ್ಟಿಗೆ ತೆರಳಿದಳು. ಪೋಲೀಸರು, ಕಾವಲುಗಾರರು, ಮತ್ತು ಊರ ಜನರಿಂದ ಕೋರ್ಟು ಕಿಕ್ಕಿರಿದು ತುಂಬಿತ್ತು. ನಡುಗದ್ದೆಯ ಗವ್ಹರ್ನರನು ಮಧ್ಯದಲ್ಲಿ ವಿರಾಜಮಾನನಾಗಿ ದ್ದಾನೆ. ಬಲಗಡೆಗೆ ಕೋರ್ಟಿನ ಬೇಲೀಫನು. ಎರಡೂ ಬದಿಗಿಬ್ಬರು ಸೈನಿಕರು. ನಡುವೆ ಕೈದಿಯು ಕೈದಿಗಳು ನಿಲ್ಲುವ ಸ್ಥಳದಲ್ಲಿ ನಿಂತಿದ್ದಾನೆ. ಅವನ ಮುಖಚರ್ಯೆಯು ಮೋನಳ ಮನಸಿನ ಮೇಲೆ ವಿಲಕ್ಷಣವಾದ ಪರಿಣಾಮವನ್ನು ಮಾಡದೆ ಬಿಡಲಿಲ್ಲ. ಇಂಥ ತಪ್ಪುಮಾಡಿದ ಪಾಪಿಯನ್ನು ಅವಳು ಹೀಗಳೆದರೂ, ಆ ತೆಳು ದೇಹದ ಬಳಸಿಕ್ಕ ಕಣ್ಣುಗಳ ಕೈದಿಯನ್ನು ನೋಡಿ ಅವಳಲ್ಲಿ ಮರುಕು ಹುಟ್ಟಿತು. ಅಲ್ಲಿಯ ಕಾವಲುಗಾರರ ಮುಖ್ಯ ಸ್ಥನ ಹಾಗೂ ಒಬ್ಬ ಕೈದಿಯ ಪುರಾವೆಗಳ ಮೇಲಿಂದ ಅವನು ತಪ್ಪು ಗಾರನೆಂದು ಸಿದ್ಧವಾಯಿತು. ಉಳಿದ ಕೈದಿಗಳೆಲ್ಲ ಮಲಗಿದ ಮೇಲೆ ರಾತ್ರಿಯಲ್ಲಿ ಇವನು ತಂತಿಯ ಹೊರಗಡೆಗೆ ಪಾರಾಗಿ ಹೋಗಲು

ಹಾಸಿಗೆಯ ಬುಡದ ನೆಲದೊಳಗಿಂದ ಒಂದು ಗುಪ್ತಮಾರ್ಗವನ್ನು ಎರಡು ತಿಂಗಳಿನಿಂದ ತೋಡುತ್ತ ಬಂದಿದ್ದನು. ಆ ತೋಡಿದ ಮಣ್ಣನ್ನು ದೇವಾಲಯದ ಮುಂದಿರುವ ತಗ್ಗಿಗೊಯ್ದು ಹಾಕಿ ಅಡಗಿಸುತ್ತಿದ್ದನು. ಕಡೆಗೆ ಒಂದು ರಾತ್ರಿ ಕತ್ತಲೆಯಲ್ಲಿ ನೆಲದೊಳಗಿಂದ ಹೊರಬರುತ್ತಿರುವ ಇವನು ಕಾವಲುಗಾರರ ಮುಖ್ಯಸ್ಥನೊಬ್ಬನ ಕೈಯಲ್ಲಿ ಸಿಕ್ಕನು. ಇವನ ಸಮೀಪದಲ್ಲಿಯೇ ಮಲಗುತ್ತಿದ್ದ ಕೈದಿಯ ಹೇಳಿಕೆಯ ಮೇರೆಗೆ ಈ ಗುಪ್ತಕಾರಸ್ಥಾನವು ಪ್ರಕಟವಾಯಿತು. ಇಷ್ಟು ಕುಹಕತನದ ಕತೆಯಿಂದಲೇ ಕೈದಿಯ ಬಗ್ಗೆ ಮೋನಳಲ್ಲಿ ವಿಪರೀತ ಕಲ್ಪನೆಗಳುದಯಿಸಿದವು; ಆದರೂ ಗವರ್ನರನಿಗೆ ಜವಾಬುಕೊಡುವ ಮುಂದೆ ಅವನು ತನ್ನ ಕಥೆಯೆಲ್ಲವನ್ನು ಹರಕುಮುರುಕು ಮಾತಿನಲ್ಲಿ ದುಃಖದಿಂದ ಹೇಳುತ್ತಿರುವಾಗ ಮೋನಳ ಕಣ್ಣಲ್ಲಿ ನೀರು ದಳದಳನೆ ಹರಿದು ಎದೆಯ ಮೇಲೆ ಧರಿಸಿದ ಪದಕದ ಮೇಲೆ ಬಿದ್ದವು.

ಅವನೊಬ್ಬ ಕೂದಲು ಸರಿಮಾಡುವವನು. ಇಂಗ್ಲಿಷರಾಕೆಯನ್ನು ಮದುವೆಯಾಗಿದ್ದಾನೆ. ಎರಡು ಚಿಕ್ಕಚಿಕ್ಕ ಮಗುಗಳಿವೆ. ತನ್ನ ಮದುವೆಯಾದ ಮೇಲೆ ಹಣಗಳಿಸಲು ವಿಂತಿಮೀರಿ ದುಡಿದನು. ಕೈಯಲ್ಲಿ ನಾಲ್ಕುದುಡ್ಡು ಸಂಗ್ರಹವಾಯಿತು; ಆದರೆ ಹೆಂಡತಿಯ ಆರೋಗ್ಯವು ಕೆಟ್ಟಿತು. ಮೊದಲನೆಯ ಮಗುವಾಗುವ ಸುಮಾರಿಗೆ ಆವಳ ಪ್ರಕೃತಿಯು ಸುಧಾರಿಸಲೆಂದು ಸಮುದ್ರದ ತೀರಕ್ಕೆ ಕರೆದುಕೊಂಡು ಹೋದನು. ಆ ಮೇಲೆ ಅವನು ಲಂಡನ್ ಪಟ್ಟಣದಲ್ಲಿ ಒಂದು ಅಂಗಡಿಯನ್ನು ಹಾಕಿಕೊಂಡು ಅಲ್ಲಿಯೇ ನೆಲಿಸಿದ್ದನು. ಕಚೇರಿಯ ವಿಧಿಗಳಿಗನುಸರಿಸಿ ಖಟ್ಲೆಯ ವಿಚಾರಣೆ ಸಾಗಿತು.

'ಇಲ್ಲದ ರಗಳೆಯನ್ನು ಹಚ್ಚಬೇಡ. ಈ ವಿಷಯಕ್ಕೆ ಸಂಬಂಧಪಟ್ಟುದನ್ನೇ ಹೇಳು' ಎಂದು ಗವರ್ನರನು ಗದ್ದರಿಸಿದನು.

ಆದರೆ ಕೈದಿಯು ಮಾತ್ರ ತನ್ನ ಕಥೆಯನ್ನೇನು ಬಿಡಲಿಲ್ಲ. ತನ್ನನ್ನು ಕೈದಿಯನ್ನಾಗಿ ಮಾಡಿ ತಂದಂದಿನಿಂದ, ಮೊದಮೊದಲು ಕೈದಿಯ ಹೆಂಡತಿಯು ತನ್ನ ಹಾಗೂ ಮಕ್ಕಳ ಯೋಗಕ್ಷೇಮದ ಪತ್ರವನ್ನು

ವಾರಕ್ಕೊಮ್ಮೆ ಬರೆಯುತ್ತಿದ್ದಳು. ಚೊಚ್ಚಿಲ ಹುಡುಗಿಯು ಅಲ್ಲಿಯೇ ಸಮೀಪದ ಒಂದು ಖಾಸಗಿ ಶಾಲೆಯಲ್ಲಿ ಕಲಿಯುತ್ತಿತ್ತು. ಶಾಲೆಯ ಹುಡುಗರು ನಿಮ್ಮಪ್ಪನೆಲ್ಲಿರುತ್ತಾನೆಂದು ಕೇಳುತ್ತಿದ್ದನಂತೆ. ಅದಕ್ಕೆ ಆ ಚಿಕ್ಕ ಹುಡುಗಿಯು 'ಅಪ್ಪ ಯುದ್ಧದಲ್ಲಿ' ಎಂದು ತಾಯಿಯು ಹೇಳಿ ಕೊಟ್ಟ ಮಾತನ್ನೇ ಹೇಳುತ್ತಿತ್ತಂತೆ. ಆದರೆ ನಿಜವಾದ ಸುದ್ದಿಯು ಪ್ರಕಟ ವಾದ ಮೇಲೆ, ಉಳಿದ ಹುಡುಗರ ಪಾಲಕರು ಈ ಹುಡುಗಿಯನ್ನು ಶಾಲೆಯಿಂದ ದೂರುಮಾಡಬೇಕೆಂದು ಆ ಶಾಲಾಧಿಕಾರಿಗಳಿಗೆ ಬಸ್ನಪಿಸಿ ಕೊಂಡದ್ದರಿಂದ ಈಗ ಅವಳು ಬೀದಿ ಬೀದಿ ಅಲೆಯುತ್ತಿದ್ದಾಳೆ.'

'ಹೂಂ! ತ್ವರೆಮಾಡು. ನೀನು ಓಡಿಹೋಗಬೇಕೆಂದು ಮಾಡಿ ದುದಕ್ಕೂ ಇದಕ್ಕೂ ಏನು ಸಂಬಂಧವಿದೆ?' ಎಂದು ಗವ್ಹರ್ನರನು ಬೆದರಿಸಿ ಕೇಳಿದನು. ನಡುನಡುವೆ ತೂಂಪರಿಕೊಡುತ್ತಿದ್ದ ಗವ್ಹರ್ನರನ ಮೇಲೆ ಮೋನಳಿಗೆ ಮಾತ್ರ ಸಿಟ್ಟು ಬಂದಿತ್ತೆಂದು ಅವಳ ಮುಖದ ಮೇಲಿಂದ ಹೇಳಬಹುದಾಗಿತ್ತು.

'ಇಷ್ಟೇ ಅಲ್ಲ—ಸಾಹೇಬರೇ, ಇನ್ನೂ ನನ್ನ ಕತೆ ಬಹಳಿದೆ' ಎಂದು ಕೈದಿಯು ಗೊಣಗಿದನು.

'ಆಗಲಿ, ಹೇಳು ಮುಂದೆ' ಎಂದು ಬೇಲೀಫನು ಆಜ್ಞೆಮಾಡಿದನು.

'ಮುಂದೆ ಕೆಲವು ದಿನಗಳವರೆಗೆ ಅವಳಿಂದ ನನಗೆ ಪತ್ರಗಳೇ ಬರಲಿಲ್ಲ. ಬಹಳ ದಿನಗಳ ಮೇಲೆ ಅಲ್ಲಿಯ ನಮ್ಮ ನೆರೆಹೊರೆಯ ನನ್ನ ಸ್ನೇಹಿತನಿಂದ ನನಗೊಂದು ಕಾಗದ ಬಂದಿತು.'

'ಅದರಲ್ಲೇನಿತ್ತು?' ಎಂದು ಬೇಲೀಫನು ಕೇಳಲಾಗಿ, ದೊಡ್ಡ ದೊಡ್ಡ ಕಣ್ಣುಗಳನ್ನು ತೆರೆದು ಕೈದಿಯು ಹೇಳತೊಡಗಿದನು: 'ಕೈದಿ ಯನ್ನಾಗಿ ಬಂಧಿಸಿದ ಮತ್ತೊಬ್ಬ ಜರ್ಮನ್ನನನ್ನು ಯಾವದೋ ಒಂದು ಕಾರಣಕ್ಕಾಗಿ ಮುಕ್ತಮಾಡಿ, ನನ್ನ ಹೆಂಡತಿಯು ಸಾಗಿಸುತ್ತಿರುವ ಉದ್ಯೋಗದಲ್ಲಿ ಸಹಾಯ ಮಾಡಲೆಂದೆಣಿಸಿ, ತಮ್ಮ ಸರಕಾರದವರೆ ಅವನನ್ನು ನಿಯಮಿಸಿದರು. ಅದೇ ನನ್ನ ಜೀವನದ ಸರ್ವಸ್ವವನ್ನು ಹಾಳುಗೆಡಹಲು ನೆವವಾಯಿತು. ದುರ್ಜನತೆಯುಳ್ಳ ಅವನು ನನ್ನ

ಹೆಂಡತಿಯನ್ನು ವಶಪಡಿಸಿಕೊಂಡನು. ಪಾಪ! ಅವಳಾದರೂ ಏನು ಮಾಡಿಯಾಳು? ಮಕ್ಕಳ ಪೋಷಣೆಯಾದರೂ ಒಳ್ಳೇ ರೀತಿಯಿಂದ ಸಾಗಬಹುದೆಂದು ಅವನ ಒತ್ತಾಯಕ್ಕೆ ಅಧೀನಳಾಗಿಬಿಟ್ಟಳು. ಸಾಹೇಬರೇ, ಈ ಕಾರಣವು ಯಾವ ಮನುಷ್ಯನನ್ನು ಕೆರಳಿಸಲಿಕ್ಕಿಲ್ಲ! ಅದೇ ನನ್ನನ್ನು ಹುಚ್ಚನನ್ನಾಗಿ ಮಾಡಿತು. ರಾತ್ರಿಯಲ್ಲಿ ಎಲ್ಲ ಕಡೆಗೂ ಶಾಂತತೆಯುಂಟಾದ ಮೇಲೆ, ಈ ದಾರಿಯನ್ನು ತೋಡಲು ಆರಂಭಿಸಿ ನಾನು ಇಲ್ಲಿಂದ ಪಾರಾಗಿ ಹೋಗಿ ಆ ಕೆಡುಕನನ್ನು ಕೊಲ್ಲಬೇಕೆಂದು ಹಂಚಿಕೆ ಹಾಕುತ್ತಿದ್ದೆ' ಎಂದು ಹೇಳಿದನು.

'ಸರಿಯಾದ ವೇಳೆಗೆ ನಾವು ನಿನ್ನನ್ನು ಬಂಧಿಸಿದೆವು. ಇಲ್ಲದಿದ್ದರೆ ಅವನ ಪ್ರಾಣವು ಉಳಿಯುತ್ತಿದ್ದಿಲ್ಲ' ಎಂದು ಗವ್ಹರ್ನರನು ಮುಗುಳು ನಗೆಯಿಂದ ನುಡಿದನು.

ಇದೆಲ್ಲವನ್ನು ಕೇಳಿಕೊಂಡು ಗವ್ಹರ್ನರನು ಕೈದಿಗೆ ಏಳು ದಿನಗಳವರೆಗೆ ಕತ್ತಲುಕೋಣೆಯ ವಾಸ, ಬ್ರೆಡ್, ನೀರನ್ನಷ್ಟೇ ಕೊಡಬೇಕೆಂದು ಶಿಕ್ಷೆಯನ್ನು ವಿಧಿಸಿದನು.

ಮೋನಳಿಗೆ ಕೋರ್ಟಿನಲ್ಲಿಯೇ ಅಳುವು ಬಂದಿತ್ತು; ಆದರೆ ಹೇಗೋ ಹತ್ತಿಕ್ಕಿಕೊಂಡು ಮನೆಗೆ ಬಂದಳು. ಮುಂದೆ ತುಸು ಹೊತ್ತಿನ ಮೇಲೆ ಆ ಕೈದಿಯನ್ನು ಬಂಧಿಸಿ, ಕಾವಲುಗಾರರು ಬರುತ್ತಿರುವದೂ ಅವಳ ಕಣ್ಣಿಗೆ ಬಿದ್ದಿತು. ಕೈದಿಯ ಮುಖವು ಬಾಡಿ, ಬೆಂಡಾಗಿತ್ತು. ಆ ಸೆರಾಶಿಯ ವಾತಾವರಣದಿಂದ ಅವನ ಜೀವನವು ಕಮರಿಹೋದಂತಿತ್ತು.

ಜರ್ಮನ್ನರ ಜಯದ ಬಗ್ಗೆ ತಂದೆಯ ಮುಂದೆ ಯಾರಾದರೂ ಸುದ್ದಿಯನ್ನು ಹೇಳಿದರೆ—ಮುದುಕನ ಬಾಯಿಂದ ಹೊರಡುವ ಉದ್ಗಾರಗಳನ್ನು ಕೇಳುವದು ಮೋನಳಿಗೆ ತೀರ ಅಸಾಧ್ಯವಾಗಿಬಿಟ್ಟಿತ್ತು. ಒಂದು ವೇಳೆ ಮೋನಳೆ ಜರ್ಮನ್ನರ ವಿಷಯಕ್ಕೆ ಮಾತನಾಡಿದರೆ ಮುದುಕನು ಕೆರಳಿ 'ನಿನಗೇನೋ ಕೆಡಕು ಕಾಯ್ದುಕೊಂಡು ಕುಳಿತಿರುವದು' ಎಂದು ಒದರುತ್ತಿದ್ದನು.

ಪ್ರತಿದಿನವೂ ಎದ್ದೊಡನೆ ಮುಳ್ಳುತಂತಿಯ ಆಚೆಯ ಬದಿಗಿರುವ

ಹೊಲಗಳಲ್ಲಿ ಹಿಂದಕ್ಕೆ ತಾನು, ತನ್ನ ಅಣ್ಣನಾದ ರಾಜಿಯು ಕೆಲಸಮಾಡು ತ್ತಿದ್ದಂತೆ, ಈಗ ಕೆಲವು ಹುಡುಗ–ಹುಡಿಗೆಯರು ದುಡಿಯುತ್ತಿರುವುದು ಅವಳ ಕಣ್ಣಿಗೆ ಬೀಳುತ್ತಿತ್ತು. ಪ್ರತಿ ದಿನ ರಾತ್ರಿ ಮಲಗಲು ಹೋಗುವ ವೇಳೆಯಲ್ಲಿ, ವಿಸ್ತಾರವಾದ ಮುಳ್ಳುಬೇಲಿಯಿಂದ ಸುತ್ತುವರಿದಿದ್ದ ಕ್ಯಾಂಪುಗಳಲ್ಲಿ ಸುತ್ತೂ ಕಡೆಗೆ ಹಚ್ಚಿರುವ ದೀಪಗಳು. ಇವೆರಡರ ಹೊರತು ಅವಳಿಗೆ ಬೇರೇನೂ ಕಾಣದ್ದರಿಂದ ಅಲ್ಲಿಯ ವಾಸವು ಅವಳಿಗೆ ಸಾಕಾಗಿ ಹೋಗಿತ್ತು; ಬೇಸತ್ತು ಹೋಗಿದ್ದಳು. ಆ ಕೂಡಲು ಕತ್ತರಿಸುವವನಂತೆ ತಾನೂ ಇಲ್ಲಿಂದ—ಈ ತುರಂಗದಿಂದ ಪಾರಾಗಿಹೋಗಬೇಕೆಂದು ವಿಚಾರ ಮಾಡುತ್ತಲೇ ಇರುತ್ತಿದ್ದಳು. ಒಂದು ವೇಳೆ ಪಾರಾಗಿಹೋದರೂ ಮುಂದೆ ಅದರ ಪರಿಣಾಮವು ಒಳಿತಾಗಲಾರದೆಂಬ ಕಲ್ಪನೆಯು ಅವಳನ್ನು ಬಾಧಿಸದೆ ಬಿಟ್ಟಿರಲಾರದು.

ಒಳ್ಳೆ ಗುಣಗಳಿಗಾಗಿ ಈ ಓಸ್ಕಾರ ಹಾಯಿಸನು ಕ್ಯಾಂಪಿನ ಕ್ಯಾಪ್ಟನ್ನನಾಗಿ ನಿಯಮಿಸಲ್ಪಟ್ಟಿದ್ದರಿಂದ ಬೇಕಾದ ಹಾಗೆ ಬೇಕಾದಲ್ಲಿಗೆ ಹೋಗಿ ಬರಲು ಅವನಿಗೆ ಅಪ್ಪಣೆಯು ದೊರೆತಿತ್ತು; ಆದರೂ ಇವರಿಬ್ಬರ ದರ್ಶನವು ಕ್ವಚಿತ್ತಾಗಿ ಸಂಭವಿಸುತಿತ್ತು. ಮಾತುಗಳಾದರೂ ಅಷ್ಟ ಕ್ಕಷ್ಟೆ. ಹೀಗಿದ್ದರೂ ಒಂದು ದಿನ ಅವನು ಅಂಗೈಯಲ್ಲಿ ಏನನ್ನೋ ಮುಚ್ಚಿಕೊಂಡು 'ಇದೇನಿದು ಗೊತ್ತೇ?' ಎಂದು ವಿಚಾರಿಸುತ್ತ ಮೋನಳು ನಿಂತಿರುವಲ್ಲಿಗೆ ಬಂದನು.

'ನನಗೆ ಗೊತ್ತಿಲ್ಲ. ನೀನೇ ಹೇಳು ಬೇಕಾದರೆ–' ಎಂದು ಮೋನಳು ವಿಚಾರಿಸಿದಳು.

'ಅದು ನಿನ್ನ ರಾಜಿಯ ಸಿಲ್ವರ್ ಲಿವ್ಹರ್‌ವಾಚ್' ಎಂದು ಹೇಳಿ ಅದನ್ನು ಹೊರದೆಗೆದನು.

'ಅದು ನಿನ್ನ ಕೈಗೆ ಹೇಗೆ ಬಂದಿತು?'

'ನಮ್ಮ ದೇಶದ ಮಾನಸ್ಥಾನದಿಂದ ನನ್ನ ಶಾಲೆಯ ಸ್ನೇಹಿತ ನೊಬ್ಬನು ಇದನ್ನು ಕಳಿಸಿದ್ದಾನೆ' ಎಂದು ಓಸ್ಕರನು ಅವಳಿಗೆ ಹೇಳಿದನು.

'ನಿನ್ನ ಸ್ನೇಹಿತನಿಗೆ ಅದು ಹೇಗೆ ದೊರತಿತು?' ಎಂದು ಆತುರತೆ ಯಿಂದ ಮೋನಳು ವಿಚಾರಿಸಿದಳು.

ಅವನು ಅವಳಿಗೆ ಹೇಳತೊಡಗಿದನು:

'ಕೊನೆಕೊನೆಗೆ ಬ್ರಿಟಿಶರು ಮುಂದುವರಿದು ದಾಳಿಯನ್ನಾರಂಭಿಸಲು ತನ್ನ ಶಾಲೆಯ ಸ್ನೇಹಿತನು ಬ್ರಿಟಿಶ್‌ಟ್ರೆಂಚದೆದುರಿನ ಮೊದಲನೆಯ ಸಾಲಿನಲ್ಲಿಯೇ ಗುಂಡು ತಾಗಿ ಬಿದ್ದನು. ತಲೆಗೆ ಗುಂಡು ಬಲವಾಗಿ ತಾಕಿದ್ದರಿಂದ ನೋವನ್ನು ತಾಳಲಾರದೆ 'ಅಪ್ಪಾ, ಅಪ್ಪಾ' ಎಂದು ಕಿರಚುತ್ತ ಸ್ವಲ್ಪ ಹೊತ್ತು ಜೀವಹಿಡಿದುಕೊಂಡು ಬಿದ್ದುಕೊಂಡಿದ್ದನು. ಆಗ ಒಬ್ಬ ಇಂಗ್ಲಿಷ ಸೈನಿಕನು ಮಾತನಾಡುವದು ಅವನಿಗೆ ಕೇಳಬಂದಿತು. 'ಇವನ ಸಂಕಟವನ್ನು ನಾನು ಕಿವಿಯಿಂದ ಕೇಳಲಾರೆ. ಹೇಗಾದರೂ ಮಾಡಿ ಇವನನ್ನು ಒಳಗೆ ತೆಗೆದುಕೊಂಡು ಬರುವೆನು' ಎಂದವನೆ ಧೈರ್ಯದಿಂದ ಮುಂದರಿದು ಹೋಗಿ ಅವನನ್ನು ಎತ್ತಿಕೊಂಡು ಬರಹತ್ತಿದನು. ಆಗ ಅವನಿಗೂ ಒಂದು ಗುಂಡು ಬಡಿಯಿತು; ಅವನೂ ನೆಲಕ್ಕುರುಳಿದನು. ಬ್ರಿಟಿಶ್ ಸೈನ್ಯದಲ್ಲಿಯ ಕೆಲವು ಹುಡುಗರು ಕೂಡಿ ಅವರಿಬ್ಬರನ್ನೂ ಒಂದು ತಗ್ಗಿಗೆ ಎಳೆದುಹಾಕಿದರು. ಸೈನ್ಯವು ಮುಂದೆ ಮುಂದೆ ಸಾಗಹತ್ತಿತು. ಅವರಿಬ್ಬರು ತಗ್ಗಿನಲ್ಲಿ ಎಷ್ಟುಹೊತ್ತು ಬಿದ್ದಿದ್ದರೆಂಬುದು ನನ್ನ ಸ್ನೇಹಿತನಿಗೂ ತಿಳಿಯದ ಮಾತು. ಅವನು ಶುದ್ಧಿಯ ಮೇಲೆ ಬಂದನು. ಗುಣವೂ ಆಗಬಹುದೆಂಬ ನಂಬಿಗೆಯೂ ಅವನಲ್ಲಿ ಉಂಟಾಯಿತು. ಆದರೆ ಅವನ ಹತ್ತಿರ ಬಿದ್ದಿದ್ದ ಬ್ರಿಟಿಶ ಸೈನಿಕನಿಗೆ ಬಲವಾದ ಪೆಟ್ಟು ಬಿದ್ದಿತ್ತು. ಉಡುಪಿನ ಮೇಲಿಂದ ನೋಡಿದರೆ ಅವನು ಲೆಫ್ಟನಂಟನೆಂದು ತೋರುತ್ತಿದ್ದನು. ಶೂರನಾದ ಅವನು ಅಂಥ ವಿಪನ್ನಾವಸ್ಥೆಯಲ್ಲಿಯೇ ಮುಡಿಚಿ ಬಿದ್ದ ಕೈಯನ್ನು ಬಹು ಪ್ರಯಾಸದಿಂದ ಹೊರತೆಗೆದು ಕಿಸೆಯಲ್ಲಿಯ ಗಡಿಯಾಳವನ್ನು ಕೈಯೊಳಗೆ ಹಿಡಿದುಕೊಂಡು 'ನೋಡು ಫ್ರಿಡ್ಜ್, ನೀನು ಜೀವದಿಂದುಳಿದು ನಿನ್ನ ಮನೆಗೆ ತೆರಳಿದ್ದಾದರೆ ಇದನ್ನು ನಾಕಾಲೋಯ್‌ದಲ್ಲಿರುವ ನನ್ನ ತಂಗಿಗೆ ಮುಟ್ಟಿಸು' ಎಂದು ಮಾತಾಡಿದನು. ಮುಂದೆ ಯಾವ ಮಾತೂ ಅವನ ಬಾಯಿಂದ ಹೊರಬೀಳಲಿಲ್ಲ. ಅವನು ಇದನ್ನು ಕಳಿಸಿಕೊಟ್ಟಿದ್ದಾನೆ' ಎಂದು ಹೇಳಿದನು. ಅವಳು ಗಡಿಯಾರವನ್ನು ಎದೆಗವಚಿಕೊಂಡು ಮನೆಯೊಳಹೊಕ್ಕಳು

ರಾತ್ರೆಂತ ರಾತ್ರೆಲ್ಲ ಮೋನಳಿಗೆ ನಿದ್ದೆಯು ಬರಲಿಲ್ಲ. ಆ ಮುಗ್ಧೆಯ ಲಿಂದ ಈ ಮುಗ್ಧೆಯ ಲಿಗೆ ಹೊರಳಾಡುತ್ತಿದ್ದಳು. ತನ್ನ ಅಣ್ಣನು ಸಾಯುವ ಕಾಲಕ್ಕೆ ತನ್ನನ್ನು ಮರೆಯದೆ ಸ್ಮಾರಕವೆಂದು ಗಡಿಯಾಳವನ್ನು ಕಳಿಸಿ ಕೊಟ್ಟ ಸುದ್ದಿಯು ಅವಳ ಮನಸನ್ನು ದುಃಖಿಗೊಳಿಸಿತು. ಹಿಂದೊಮ್ಮೆ ಒಬ್ಬ ಸೈನಿಕನ ಪತ್ರವನ್ನು ಓದಿ ತೋರಿಸಿದಾಗ ತನ್ನ ತಂದೆಯು ಏನೆಂದಿದ್ದನೆಂಬುದು ಅವಳ ಸ್ಮೃತಿಪಟಲದ ಮೇಲೆ ಇನ್ನೂ ಹಾಗೆಯೇ ಉಳಿದಿತ್ತು. ಆದುದರಿಂದ ಅವಳು ರಾಬಿಯು ಗಡಿಯಾಳದ ಸುದ್ದಿಯನ್ನೇ ಅವನ ಮುಂದೆ ತೆಗೆಯಲೇಬಾರದೆಂದು ಗೊತ್ತುಮಾಡಿ ಬಚ್ಚಿಟ್ಟು ಬಿಟ್ಟಳು. ಸತ್ತವರು ಎದ್ದು ಬಂದಂತೆ ಅದು ತನ್ನೆಡೆಗೆ ಬಂದಿರುವ ದೆಂಬ ಕಲ್ಪನೆಯಿಂದ ಅವಳು ಹೆದರಿ ಅದರ ಕಡೆಗೆ ಮತ್ತೊಮ್ಮೆ ಕಣ್ಣೆತ್ತಿ ಸಹ ನೋಡಲಿಲ್ಲ.

ಹೆಣಗಳ ರಾಶಿಯೇ ಬಿದ್ದ ಆ ಯುದ್ಧಭೂಮಿಯಲ್ಲಿ ಆ ಹುಡುಗ ರಿಬ್ಬರು ಅಲ್ಲಿ ನರಳುತ್ತ ಬಿದ್ದುಕೊಂಡು—ಅದರಲ್ಲಿ ಒಬ್ಬನು ತನ್ನ ತಂಗಿ ಯನ್ನು ನೆನೆಸುವವನೂ, ಮತ್ತೊಬ್ಬನು ತನ್ನ ತಾಯಿಯನ್ನು ಸ್ಮರಿಸು ವದೂ—ಎಂಬುದನ್ನು ಶಾಂತರೀತಿಯಿಂದ ವಿಚಾರಮಾಡಿದರೆ—ತೀರ ಕೊನೆಯ ಕಾಲದಲ್ಲಿ ಅವರಿಬ್ಬರೂ ಸ್ನೇಹಿತರಾಗಿದ್ದಿರಬಹುದೇ? ಅವರಿಗೆ ಅಂಥ ಕಾಲವು ಯಾವ ದುಷ್ಟರಿಂದ ಪ್ರಾಪ್ತವಾಯಿತು?

ಅಯ್ಯೋ! ದೇವರೇ, ಮನುಷ್ಯರು ಯುದ್ಧವನ್ನು ಯಾಕೆ ಹೂಡು ತ್ತಾರೆ? ಅದರಿಂದ ಯಾವ ಧ್ಯೇಯವನ್ನು ಸಾಧಿಸುವರೋ ತಿಳಿಯದು.

---

## ಮೂರ್ಛೆ

ಕೊನೆಯ ಮೊದಲು ಆರಂಭವಾಯಿತೆಂದು ಮೋನಳು ಕಲ್ಪಿಸಿ ದಳು. ಓಸ್ಕಾರನ ವಿಚಾರವನ್ನು ಬಿಟ್ಟು ಅವಳ ತಲೆಯಲ್ಲಿ ಬೇರೆ ಯಾವ ವಿಚಾರಗಳೇ ಸುಳಿಯುತ್ತಿರಲಿಲ್ಲ. ಹಗಲು—ರಾತ್ರಿ ಅದೇ ವಿಚಾರ ಅವಳಿಗೆ. ಬೇರೆ ವಿಚಾರಗಳು ಅದೇಕೆ ಬರುತ್ತಿದ್ದಿಲ್ಲವೆಂಬುದು ಅವಳಿಗೂ ತಿಳಿಯದ

ಮಾತಾಗಿತ್ತು. ಅವಳಲ್ಲಿ ಭಯ–ಭೀತಿಯೂ ಅಪಮಾನವೂ ಏಕಕಾಲಕ್ಕೆ ತಾಂಡವವಾಡುತ್ತಿದ್ದವು.

ನೆರೆಹೊರೆಯ ಒಕ್ಕಲಿಗನೊಬ್ಬನು ಒಂದು ದಿನ ಬಂದು, ಮುದುಕನ ಕಿವಿಯ ಮೇಲೆ ಮತ್ತೊಂದು ಹೃದಯದ್ರಾವಕವಾದ ಸುದ್ದಿಯನ್ನು ಹಾಕಿದನು. ನಡುಹಗಲಿನಲ್ಲಿಯೇ ಲಂಡನ್ನ ಪಟ್ಟಣದ ಮೇಲಾದ ದಾಳಿಯಲ್ಲದೆ ಬೇರೇನಿರಲಿಲ್ಲ.

ಲಂಡನ್ನದ ಪಶ್ಚಿಮಭಾಗದಲ್ಲಿರುವ ಒಂದು ಪ್ರಾಥಮಿಕ ಶಾಲೆಯಲ್ಲಿ ಮೂರು ವರುಷದಿಂದ ಆರುವರುಷದೊಳಗಿನ ಒಂದು ನೂರು ಸಣ್ಣಸಣ್ಣ ಹುಡುಗರು ಒಂದುದಿನ ಮೃದುಸ್ವರದಿಂದ ಪ್ರಾರ್ಥನೆಯನ್ನು ಅನ್ನತೊಡಗಿದ್ದರು. ಅಷ್ಟರಲ್ಲಿಯೇ ಆಕಾಶದೊಳಗಿಂದ ಜರ್ಮನ್ನರ ವಿಮಾನವೊಂದು ಎರಡು ಬಾಂಬುಗಳನ್ನೂ ಚಲ್ಲಿದ್ದರಿಂದ ಹತ್ತು ಹುಡುಗರು ತಕ್ಷಣವೆ ಜೀವ ಬಿಟ್ಟರು; ಐವತ್ತು ಹುಡುಗರಿಗೆ ವಿಪರೀತ ಗಾಯಗಳಾದವು. ಆ ದೃಶ್ಯವು ಎಂತಹ ಕಲ್ಲೆದೆಯವರನ್ನೂ ಸಹ ಕರಗಿಸದೆ ಬಿಡಲಾರದು. ಕೆಲವು ಹುಡುಗರ ಗುರುತು ಹತ್ತದಷ್ಟು ಅವರ ಮಾಟಾದ ಅವಯವಗಳು ಚೂರುಚೂರಾಗಿ ಸಿಡಿದು ಬಿದ್ದಿದ್ದವು. ಅವರವರ ತಾಯಿ–ತಂದೆಗಳಿಗೆ ಈ ಭೀಕರ ಸುದ್ದಿಯು ಕಿವಿಗೆ ಬಿದ್ದೊಡನೆ ಎದೆ ಎದೆ ಬಡಿದುಕೊಳ್ಳುತ್ತ ಗೋಳೋ ಎಂದು ಘೋರಾಡುತ್ತ ಶಾಲೆಗೆ ಬಂದರು. ರಕ್ತದ ಪ್ರವಾಹದಲ್ಲಿ ಮುಳುಗೇಳುತ್ತಲಿದ್ದ ತಮ್ಮ ತಮ್ಮ ಕರಳುಗಳನ್ನು ಗುರುತಿಸಲಾರದೆ ಕಂಬನಿಗರೆಯುವಂಥ ತಾಯಿ–ತಂದೆಗಳನ್ನು ನೋಡಿದವರ ಎದೆಯೂ ಬಿರಿಯುವಷ್ಟು ಆ ದೃಶ್ಯವು ಭಯಾನಕವಾಗಿತ್ತು.

ಆ ಒಕ್ಕಲಿಗನು ಈ ಕರುಣಾಜನಕವಾದ ಕಥೆಯನ್ನು ಮುಗಿಸುವ ಹೊತ್ತಿಗೆ ಮೋನಳು ತಂದೆಯ ಹಾಸುಗೆಯ ಬಳಿಯಲ್ಲಿ ಬಂದು ನಿಂತಳು. ಮುದುಕನ ದೇಹವು ನಖಶಿಖಾಂತ ಆವೇಶವನೆ ನಡುಗುತ್ತಿತ್ತು. ಕಣ್ಣು ಕೆಂಡದಂತಾಗಿದ್ದವು. ಕಾಲನ್ನು ನೆಲಕ್ಕೆ ಅಪ್ಪಳಿಸಿ, ಕೈಯಲ್ಲಿಯ ಕೋಲನ್ನು ಎದುರಿನ ಗೋಡೆಗೆ ತಿವಿಯುತ್ತ ಭೀಷ್ಮಪ್ರತಿಜ್ಞೆ ಮಾಡುವವರಂತೆ ಗಟ್ಟಿಯಾಗಿ ಚೀರತೊಡಗಿದನು. ಮುದುಕನಿಗೆ ಇಂದು ಒಂದಂಥ

ಸಿಟ್ಟನ್ನು ಇದುವರೆಗೆ ಯಾರೂ ಕಂಡರಿಯರು. 'ಇದಕ್ಕಾಗಿ ಅವರಿಗೆ ಪ್ರಾಯಶ್ಚಿತ್ತವಾಗಲೇಬೇಕು. ಇದರ ಹತ್ತುಪಟ್ಟು! ಸಾವಿರಪಟ್ಟು! ಈ ನಾಯಿಮಕ್ಕಳಿಗೆ ದೇವರು ಪ್ರತ್ಯೇಕವಾದ ಒಂದು ನರಕವನ್ನು ನಿರ್ಮಿಸಲಿ' ಎಂದು ಮುದುಕನ ಬಾಯಿಯಿಂದ ಅರಳು ಹುರಿದಂತೆ ಶಬ್ದಗಳು ಹೊರಬಿದ್ದವು.

ಲಂಡನ್ನಿನಲ್ಲಿಯ ಸರಕಾರವು ಸೇಡು ತೀರಿಸದೆ ಬಿಡಬಾರದು. ಸೇರಿಗೆ ಸವ್ವಾಸೇರು! ಆ ಶಾಲೆಯಲ್ಲಿ ಜರ್ಮನ್ನರ ಬಾಂಬಿಗೆ ತುತ್ತಾದಂಥ ಬ್ರಿಟಿಶ ಒಬ್ಬ ಹುಡುಗನಿಗೆ ಒಂದು ಸಾವಿರ ಜರ್ಮನ್ನ ಹುಡುಗರನ್ನು ಬಲಿ ತೆಗೆದುಕೊಳ್ಳದೆ ಹೋದರೆ ತನ್ನ ದ್ವೇಷವು ಶಾಂತವಾಗಲಾರದೆಂದೂ ಮುದುಕನು ವ್ಯಕ್ತಪಡಿಸಿದನು.

ಮೋನಳು ತಂದೆಯನ್ನು ಸಾಂತ್ವನಗೊಳಿಸಲು ತನ್ನ ಶಕ್ತಿಮೀರಿ ಯತ್ನಿಸಿದಳು. 'ಲಂಡನ್ನ ಪಟ್ಟಣದಲ್ಲಿ ತೀರಿಹೋದ ಹುಡುಗರಿಗೆ, ಜರ್ಮನಿಯಲ್ಲಿ ಬಾಲರಂಜನೆಯಲ್ಲಿ ಮಗ್ನವಾಗಿರುವ ಜೀವಂತ ಹುಡುಗರ ಮರಣವು ಯಾವ ರೀತಿಯಿಂದ ಸುಖಸಮಾಧಾನಗಳನ್ನು ಕೊಡಬಲ್ಲದು? ಹುಡುಗರು ಪಾಪ! ಅಜ್ಞಾನಿಗಳು' ಎಂದು ಅವಳು ಮೆಲ್ಲನೆ ಗೊಣಗಿದಳು.

'ಅಜ್ಞಾನಿಗಳೆ? ಅವು ಹಾಗೆ ಬಹಳ ದಿನಗಳವರೆಗೆ ಉಳಿಯಲಾರವು. ಅವು ಬೇಗನೆ ದೊಡ್ಡವಾಗಿ ದೊಡ್ಡವರ ಕಿತ್ತೆಯನ್ನು ತೀಡದಿರವು. ದೇವರೇ, ಅವುಗಳ ನಾಶನವನ್ನು ಬೇಗನೆ ಮಾಡದಿರಬೇಡ' ಎಂದು ಮುದುಕನು ಶಪಿಸಿದನು.

'ಅಯ್ಯೋ! ತಂದೆಯೇ ಏನಿದು?'

'ಯಾಕೆ? ಹೀಗಾಗಬಾರದು ಹೇಳು? ನಮ್ಮ ಕಂದಮ್ಮಗಳ ಮರಣವು ನಮ್ಮನ್ನು ಯಾಕೆ ಕೆರಳಿಸಬಾರದು? ನಿನ್ನ ಸ್ವಾಭಿಮಾನ ಮೆಸ್ಸಿತ್ತು! ಎಲ್ಲವೂ ಎಲ್ಲಿ ಹೋಯಿತು? ನಿನ್ನ ಮನಸು ಬದಲಾಗಲು ಕಾರಣವೇನು? ಕೆಳಗೆ ಏನೇನು ನಡೆಯುತಿರುತ್ತಿಯೋ—ನನಗೆ ತಿಳಿಯದು.'

ಮೋನಳಿಗೆ ಆ ಮಾತಿನ ಪೆಟ್ಟು ಎದೆಯಲ್ಲಿ ನಟ್ಟು ಬೆನ್ನಲ್ಲಿ ಪಾರಾದಂತಾಯಿತು. ಅವಳು ಮರುಮಾತನಾಡದೆ ಅಲ್ಲಿಂದ ಬಿರಬಿರನೆ ಹೊರಬಂದಳು.

ತುಸು ಹೊತ್ತಿನ ಮೇಲೆ, ಅವಳಲ್ಲಿ ತಾಯ್ತನದ ಕರುಳು ಜಾಗೃತವಾಯಿತು. ತಂದೆಯಾಡಿದ ಮಾತುಗಳಲ್ಲಿ ಅಡಗಿರುವ ಭಾವನೆಯು ಪ್ರತಿಯೊಬ್ಬರಲ್ಲಿಯೂ ಹುಟ್ಟುವದು ಸಹಜವಾದ ಮಾತು. ಕಂಡಮ್ಮಗಳ ಮೇಲೆ ಯುದ್ಧವನ್ನು ಹೂಡುವದೆಂದರೆ ಅಪರಾಧದ ಪರಮಾವಧಿಯಲ್ಲದೆ ಮತ್ತೇನು? ಇದರಂಥ ಪಾಪವು ಮತ್ತೊಂದಿಲ್ಲ. ಇಂಥ ಕ್ರೂರ ಕೃತ್ಯವನ್ನು ಯಾರು ಮಾಡುವರೋ ಅವರು ರಾಕ್ಷಸಕುಲದವರಿರಲು ಬೇಕೆಂಬ ವಿಚಾರಗಳು ಅವಳ ತಲೆಯಲ್ಲಿ ಸುಳಿದಾಡಿರಲು ಸಾಕು.

ಅಂದಿನ ಸಂಜೆಯಲ್ಲಿಯೆ, ಅವಳು ಅತ್ತಿತ್ತ ಅಲೆದಾಡಿ ಬರಬೇಕೆಂದು ಹೊರಟಿರುವಾಗ ಓಸ್ಕಾರಹಾಯಿನನು ತನ್ನ ಕಂಪೌಂಡಿನೊಳಗಿಂದ ಹೊರಬರುತ್ತಿದ್ದನು. ಅವಳು ಅವನನ್ನು ನೋಡದೆ ಮುಂದೆ ಸಾಗಿದ್ದಳು. ಅವನೆ ಅವಳನ್ನು ನಿಲ್ಲಿಸಿ 'ವರ್ತಮಾನಪತ್ರದಲ್ಲಿ ಬಂದಿರುವ ಸುದ್ದಿಯನ್ನು ಓದಿರುವಿಯಾ' ಎಂದು ಕೇಳಿದನು.

'ಓಹೋ! ಓದಿದ್ದೇನೆ, ಓದದೇನು ಮಾಡಲಿ!'

'ನನಗೆ ನಿಜವಾಗಿಯೂ ಬಲು ಸಂತಾಪವಾಗಿದೆ. ಇಂಥ ಅಕ್ಷಮ್ಯ ಅಪರಾಧವನ್ನು ನಮ್ಮವರು ಮಾಡಲಾರರೆಂದು ನಾನು ಬಗೆದಿದ್ದೆನು. ಅದಕ್ಕಾಗಿ ನಾಚಿಕೆಯಾಗಿದೆ'

'ದುಃಖವಾಗಿದ್ದೀತು! ನಿಮ್ಮ ಜನರು ಮಾಡಿದುದರ ಸೇಡನ್ನು ನಮ್ಮವರು ತೀರಿಸಿಕೊಂಡರೆ ನಿಮಗೆ ಚನ್ನಾಗಿ ತಿಳಿಯುವದು. ಅಲ್ಲಿಯವರೆಗೆ ನಿಮ್ಮವರಿಗೆ ಬುದ್ಧಿ ಬರಲು ಸಾಧ್ಯವೇ ಇಲ್ಲ.'

ಅವನು ಇನ್ನೂ ಏನನ್ನೋ ಹೇಳಬೇಕೆಂದು ಮಾಡಿದ್ದನು; ಆದರೆ ಅವಳು ಕೇಳಿಕೊಳ್ಳದೆ ಎದೆಯುಬ್ಬಿಸಿಕೊಂಡು ಬರಬರನೆ ಮುಂದೆ ಸಾಗಿಯೇ ಬಿಟ್ಟಳು.

ಒಂದು ವಾರ ಕಳೆದರೂ ಮೋನಳಿಗೆ ಓಸ್ಕಾರನ ಬಗ್ಗೆ ಯಾವ ಸುದ್ದಿಯೂ ಬರಲಿಲ್ಲ. ಎಲ್ಲಿ ಬೇಕಾದಲ್ಲಿ ತಿರುಗಾಡಲು ಅವನಿಗೆ ಅಪ್ಪಣೆಯಿದ್ದರೂ, ಅವನು ಇವಳ ಭೆಟ್ಟಿಗೆ ಬರುವದನ್ನೇ ಬಿಟ್ಟಿದ್ದನು. ಲಂಡನ್ನ ಪಟ್ಟಣದ ಮೇಲಾದ ಅನ್ಯಾಯದ ಅನಾಹುತವು ಅವಳನ್ನು ಮುತ್ತಿನಷ್ಟು

ಉದ್ರೇಕಗೊಳಿಸಿತ್ತು. ಏನೆಂದರೂ ಯುದ್ಧವೆಂದರೆ ಹೀಗೆಯೇ ಅಲ್ಲವೇ? ಯುದ್ಧದಲ್ಲಿ ಪ್ರಾಪ್ತವಾದ ಜಯವು ಒಂದೇ ಒಂದು ಅರ್ಭಕನ ಹತ್ಯೆಯ ಮುಂದೆ ಶೂನ್ಯವಾದುದು; ಆದರೆ ಅದನ್ನಾರು ಈಗ ಗಮನಿಸುವವರು ಇಂದಿನ ಜಗತ್ತಿನಲ್ಲಿ? ಅದನ್ನು ಯಾರು ಕೇಳುವವರು? 'ಕೂಸುಗಳನ್ನು ಹಿಂಸಿಸಿ ನನ್ನೆಡೆಗೆ ಬರುವಿರಾ..' ಎಂಬ ಕ್ರಿಸ್ತನ ವಾಕ್ಯಗಳ ಅರ್ಥವು ಮಾನವರಿಗೆ ತಿಳಿದಿರುವದೇ ಇಲ್ಲ. ಆತನು ೨೦೦೦ ವರುಷಗಳ ಹಿಂದೆ ಅಂದ ಮಾತುಗಳು! ಆದರೆ ಯಾರಾದರೂ ಅವನ್ನು ಲಕ್ಷಿಸಿರುವರೇ— ಆ ಮಾತನ್ನು—ಇಂದಿನ ಈ ಯುದ್ಧಪ್ರಿಯ ಜನಾಂಗಗಳಲ್ಲಿ!

ಇನೇನು ಕ್ರಿಸ್‌ಮಸ್ ಹಬ್ಬವು ಸಮೀಪಿಸಿತು. ಪಶ್ಚಿಮಭಾಗದಲ್ಲಿ ನಡೆಯುತ್ತಿದ್ದ ರಣಾಂಗಣದ ಎರಡೂ ಬಣದ ಪರಿಸ್ಥಸೈನ್ಯಾಧಿಕಾರಿಗಳು ಪರಸ್ಪರರಲ್ಲಿ ಒಡಂಬಡಿಕೆಮಾಡಿಕೊಂಡು, ಕ್ರಿಸ್‌ಮಸ್ ದಿನದ ನಿಮಿತ್ಯ ವಾಗಿ ೪ ತಾಸುಗಳವರೆಗೆ ಯುದ್ಧವನ್ನು ನಿಲ್ಲಿಸಬೇಕೆಂದು ವರ್ತಮಾನ ಪತ್ರದಲ್ಲಿ ಪ್ರಕಟವಾದ ಸುದ್ದಿಯನ್ನು ಮೋನಳು ಓದಿದಳು. ಒಳ್ಳೆ ವಿಚಾರವು! ದೇವರು ಅವರಿಗೆ ಅಲ್ಪಕಾಲವಾದರೂ ಸದ್ಬುದ್ಧಿ ಕೊಟ್ಟನಲ್ಲ! ಎಂಬ ಆನಂದವು ಕಡಮೆಯದಲ್ಲ. ಕ್ಯಾಂಪಿನಲ್ಲಿಯೂ ಕೂಡ ಸಿಪಾಯ್ರಲ್ಲ ರಿಗೂ ಆ ರಣಾಂಗಣದಲ್ಲಾದ ಒಡಂಬಡಿಕೆಯ ಫಲವು ಏಕೆ ದೊರೆಯ ಲಾರದೆಂಬ ವಿಚಾರವನ್ನು ಓಸ್ಕಾರನ ತಲೆಯಲ್ಲಿ ಅವಳು ತುಂಬದೆ ಬಿಡಲಿಲ್ಲ.

'ಒಳ್ಳೇ ವಿಚಾರವಿದು! ಅಹುದು, ನಮಗೇಕೆ ಬೇಡ?' ಎಂದು ಅವನು ಮುಗುಳು ನಗೆಯಿಂದ ಮರುಮಾತನಾಡಿದನು.

ಮೊದಲಿಗೆ ಕಮಾಂಡಂಟನ ಮುಂದೆ ಈ ವಿಚಾರವನ್ನು ಪ್ರಸ್ತಾ ಪಿಸಿ, ಅಪ್ಪಣೆಪಡೆದುಕೊಳ್ಳುವ ದಾರಿಯನ್ನು ಹುಡುಕಿದನು. ತನ್ನ ಸಹ ಭಾಗಿಗಳಾದ ಕೈದಿಗಳ ಮುಂದೆಯೂ ಈ ವಿಷಯದ ಪ್ರಸ್ತಾಪವನ್ನೆತ್ತಿ ದನು. ಆದುದರಿಂದ ಕಮಾಂಡಂಟನ ಒಪ್ಪಿಗೆಯನ್ನು ಪಡೆಯುವದು ಓಸ್ಕಾರನಿಗೆ ತೊಂದರೆಯೆನಿಸಲಿಲ್ಲ. ಸುಲಭವಾಗಿಯೇ ಅಪ್ಪಣೆಯು ದೊರೆತುಬಿಟ್ಟಿತು.

ಕೈದಿಗಳೆಲ್ಲರನ್ನೂ ಕೆಲಸದಲ್ಲಿ ತೊಡಗಿಸಿದಂದಿನಿಂದ ಮಾನವತೆಯ ಹೆಚ್ಚು ಅಂಶಗಳು ಅವರಲ್ಲಿ ಕಂಡುಬರತೊಡಗಿದ್ದುವು. ಪ್ರತಿಯೊಂದು ಕಂಪೌಂಡಿಗೂ ಒಂದೊಂದು ಬ್ಯಾಂಡು ವಾದ್ಯವು ದೊರೆತಿತ್ತು. ಅವರು ನಾನಾತರಹದ ಮನೋರಂಜನೆಗಳಲ್ಲಿ ಕೆಲವೊಂದು ಕಾಲವನ್ನು ಕಳೆಯ ತೊಡಗಿದ್ದರು. ಅಂಗರಕ್ಷಕರಿಗೂ ಸಹ ಪ್ರತ್ಯೇಕವಾಗಿಯೇ ವಾದ್ಯಗಳನ್ನು ಒದಗಿಸಿಕೊಡಲಾಗಿತ್ತು. ಅವರೂ ಕಾಯುವ ಕೈದಿಗಳಲ್ಲವೇ?

'ಕ್ರಿಸ್‌ಮಸ್ ಹಬ್ಬವೆ ಬಂದಿದೆ! ದೇವರು ಎಲ್ಲರಿಗೂ ಒಳಿತನ್ನು ಮಾಡಲಿ. ನೀವೆಲ್ಲರೂ ಹಬ್ಬವನ್ನು ಉಪಭೋಗಿಸಿರಿ' ಎಂದು ಕಮಾಂಡಂಟನು ಅಪ್ಪಣೆಯನ್ನಿತ್ತುದನ್ನು ಓಸ್ಕಾರನು ಮೋನಳಿಗೆ ತಿಳಿಯಪಡಿಸಿದನು. ಅದರಿಂದ ಅವಳಿಗೆ ತನ್ನ ಸೂಚನೆಯು ಮಾನ್ಯವಾಯಿತೆಂದು ತುಸು ಹೊತ್ತು ಆನಂದವಾಗದಿರಲಿಲ್ಲ. ಕೈದಿಗಳಿಗಾದ ಆನಂದವಂತೂ ಅಷ್ಟಿಷ್ಟಲ್ಲ. ಅವರನ್ನು ಹಿಡಿದವರೇ ಇಲ್ಲ. ಅಂಗರಕ್ಷಕರೂ ಸಹ ಅವರೊಡನೆ ಹಬ್ಬದ ಮನೋರಂಜನೆಗಳಲ್ಲಿ ಭಾಗವಹಿಸಲು ಒಪ್ಪಿಕೊಂಡರು.

'ಏನಾದರೂ ಆಗಲಿ, ಈ ಕೈದಿಗಳು ಅಷ್ಟು ನೀಚ ಮನುಷ್ಯರಲ್ಲ' ಎಂದು ಕ್ಯಾಪ್ಟನ್ನನು ಅಂದು ಉದ್ಗಾರತೆಗೆದನು

ಕ್ರಿಸ್‌ಮಸ್ ಹಬ್ಬದಾರಂಭದಿಂದಲೇ ಮನೋರಂಜನೆಗಾರಂಭವಾಯಿತು. ಎಲ್ಲ ಕಂಪೌಂಡಿನವರೂ ತಮ್ಮ ತಮ್ಮ ವಾದ್ಯಗಳನ್ನು ನುಡಿಸತೊಡಗಿದರು. ರಾತ್ರಿಯ ಶಾಂತವಾತಾವರಣದಲ್ಲಿ ಆ ಎಲ್ಲ ಸ್ವರವು ಒಂದುಗೂಡಿ ಒಂದು ಇಂಪಾದ ಮಿಶ್ರಧ್ವನಿಯು ಹಿಮ್ಮೇಳದ ಧ್ವನಿಯಂತೆ ಕೇಳಬರುತ್ತಲಿತ್ತು. ಅಂದಿನ ದಿನವೆ ಓಸ್ಕಾರನು ಒಕ್ಕಲುಮನೆಗೆ ಬಂದು ಸ್ವರಮೇಳವೊಂದನ್ನು ಏರ್ಪಡಿಸುವ ವಿಚಾರದಲ್ಲಿದ್ದೇವೆಂದು ಮೋನಳಿಗೆ ತಿಳಿಸಿದನು. ಅದಕ್ಕಾಗಿ ಪದ್ಯಗಳನ್ನು ಆರಿಸಿಕೊಡಬೇಕೆಂದು ಅವಳನ್ನು ಕೇಳಿಕೊಂಡನು. ಅವಳು ತನಗೆ ಚನ್ನಾಗಿ ಬರುವಂಥ 'Noel' 'The feast of stephen,' ಮತ್ತು 'Lead kindly light' ಎಂಬ ಮೂರು ಪದ್ಯಗಳನ್ನು ಸೂಚಿಸಿದಳು.

'ಬಹು ರಮ್ಯವಾದ ಹಾಡುಗಳು! ಚನ್ನಾಯಿತು' ಎಂದು ಅಂದು, ತಾನು ಮೂರನೆಯ ಕಂಪೌಂಡಿನ ವ್ಯವಸ್ಥಾಪಕನಾಗಿರುವೆನೆಂದು ಅವಳಿಗೆ ತಿಳಿಯಪಡಿಸಿದನು.

ಸಂಜೆಯಾದಂತೆ ಮಂಜು ಹೆಚ್ಚಾಗಿ ಬೀಳತೊಡಗಿತು; ಆ ಮೇಲೆ ಹಿಮವು ಬಿದ್ದು ಕ್ಯಾಂಪಿನ ಕಪ್ಪುನೆಲವೆಲ್ಲ ಬಿಳಿವಸ್ತ್ರದಿಂದ ಹೊಚ್ಚಿದಂತೆ ಕಾಣುತ್ತಿತ್ತು. ಮೇಲಾಗಿ ಆಕಾಶದಲ್ಲಿ ಚಂದ್ರನು ತನ್ನ ಶುಭ್ರಕಾಂತಿಯಿಂದ ವಿರಾಜಮಾನನಾಗಿದ್ದಾನೆ. ಮೊದಲೆ ಹಬ್ಬದ ದಿನವು; ಅದರಲ್ಲಿ ಈ ನೈಸರ್ಗಿಕ ಶೋಭೆಯಿಂದ ವಾತಾವರಣವು ಬಲು ಆಲ್ಹಾದಕರವಾದ್ದರಿಂದ ಹಬ್ಬಕ್ಕೆ ಇನ್ನಿಷ್ಟು ಕಳೆಯೇರಿತು.

ಅಂದು ಮೋನಳಿಗೆ ಇಡಿ ದಿನವೆಲ್ಲ ಬಿಡುವೇ ಇಲ್ಲ. ಆದರೂ ರಾತ್ರಿ ಒಂಬತ್ತುಗಂಟೆಗೆ ಕೆಲಸವೆಲ್ಲವನ್ನೂ ಪೂರ್ತಿಗೊಳಿಸಿ, ತಂದೆಯ ಹತ್ತಿರ ಕುಳಿತುಕೊಳ್ಳಲು ಅವಳು ಮೇಲೇರಿ ಹೋದಳು. ಹಾಸಿಗೆಯಲ್ಲಿಯೇ ಬಿದ್ದುಕೊಂಡಿದ್ದ ಮುದುಕನಿಗೆ ಇವಳ ಅಂದಿನ ಚಟುವಟಿಕೆಯ ಸುಳಿವು ಹತ್ತದಿರಲಿಲ್ಲ; ಅದರಿಂದ ಅವನಿಗೆ ಎಳ್ಳಷ್ಟೂ ಸಂತೋಷವೆನಿಸಿರಲಿಲ್ಲ.

'ಮಗಳೇ, ನಿನ್ನ ದೈವದಲ್ಲಿ ಆಪತ್ತು ಒದಗುವದಿದೆ' ಎಂಬ ಮಾತನ್ನು ಪಲ್ಲವಿಯಂತೆ ಮುದುಕನು ಬಿಟ್ಟೂಬಿಡದೆ ಒದರುತಿಯುತ್ತಿದ್ದನು.

'ತಂದೆಯೇ, ಹಾಗೇಕೆ ಭಾವಿಸುವಿ? ಇಂದು ಕ್ರಿಸ್‌ಮಸ್ ಹಬ್ಬವಲ್ಲವೇ?' ಎಂದು ಮೋನಳು ಮೆಲುದನಿಯಲ್ಲಿ ಮಾತನಾಡಿದಳು.

ಆಗ ಅವಳಿಗೆ ಇನ್ನೂ ಮೂರು ತಾಸುಗಳನ್ನು ನೂಕಬೇಕಾದ್ದರಿಂದ ಅವಳು ಅಗ್ಗಿಷ್ಟಿಕೆಯ ಬದಿಯಲ್ಲಿ ಕುಳಿತು ತಂದೆಯ ಮುಂದೆ ದೇವರ ಪ್ರಾರ್ಥನೆಗಳನ್ನು ಓದತೊಡಗಿದಳು.

'ಓ! ದೇವದೂತನು ಅವರ ಬಳಿ ಸಾರಿದನು. ದೇವನ ಪ್ರಭಾವವು ಅವರ ಸುತ್ತಲೂ ಪ್ರಕಾಶಮಾನವಾಯಿತು; ಅವರು ಬಲು ಬೆದರಿದರು.'

'ಅಂಜಬೇಡಿರಿ. ಅಕೋ ಕೇಳಿರಿ! ಅತ್ಯಂತ ಆನಂದದಾಯಕವಾದ ಸುದ್ದಿಗಳನ್ನು ತಂದಿದ್ದೇನೆ. ಎಲ್ಲರಿಗೂ ಉಪಯೋಗವಾಗುವಂಥವಿವೆ.'

‘ಇಂದೆ ಡೇವಿಡ್‌ಪಟ್ಟಣದಲ್ಲಿ ನಿಮ್ಮ ಉದ್ಧಾರಕನಾದ ಕ್ರಿಸ್ತದೇವನು ಜನ್ಮ ತಾಳಿದ್ದಾನೆ... ...’

‘ಒಮ್ಮೆಲೆ ದೇವದೂತನ ಸುತ್ತುಮುತ್ತು ಸ್ವರ್ಗದ ಅತಿಥಿಸಮೂಹವು ಬಂದು ದೇವರನ್ನು ಪ್ರಾರ್ಥಿಸುತ್ತ ‘ದೇವರ ಕೀರ್ತಿಯು ಅದ್ಭುತವಾದುದು! ಜಗತ್ತಿನಲ್ಲಿ ಶಾಂತಿಯು! ಮಾನವರಿಗೆ ಸದ್‌ಬುದ್ಧಿಯು!’ ಎಂದು ದೊಡ್ಡ ದನಿಯಿಂದ ಜಯ ಘೋಷವನ್ನು ಮಾಡಿತು.’

ಮೋನಳು ಓದುವದನ್ನು ನಿಲ್ಲಿಸಿದಳು. ಮುದುಕನು ಗೊರ್‌ಗೊರ್ ಮಾಡಹತ್ತಿದನು; ಗಾಢವಾಗಿ ನಿದ್ದೆಯೂ ಹತ್ತಿಬಿಟ್ಟಿತು.

ಮೋನಳು ತನ್ನ ಕೋಣೆಗೆ ಬಂದಾಗ ಹನ್ನೊಂದು ಗಂಟೆಯಾಗಿತ್ತು. ಎಷ್ಟು ಸೊಗಸಾದ ರಾತ್ರಿಯು! ಪೂರ್ಣಚಂದ್ರನು ಆಕಾಶದಲ್ಲಿ ಬೆಳಗುತ್ತ ಆಹ್ಲಾದಬೀರುತ್ತಿದ್ದಾನೆ. ಅವನ ತಂಪಾದ ಕಿರಣಗಳ ಬೆಳಕು ಕೋಣೆಯ ಕಿಡಿಕಿಯೊಳಗಿಂದ ಅವಳ ಹಾಸುಗೆಯ ಮೇಲೆ ಬಿದ್ದಿದ್ದವು. ನಿಶಾಕಾಂತನ ಬೆಳದಿಂಗಳು ಕ್ಯಾಂಪಿನ ಮೇಲೆ ಪಸರಿಸಿದ್ದರಿಂದ ದೀಪಗಳು ಅಂದು ಬೆಳಗುತ್ತಿರಲಿಲ್ಲ. ಕಳೆದ ಮೂರು ವರುಷಗಳಲ್ಲಿ ಬೀಳದಂಥ ಹಿಮವು ಇಂದೇ ಮೊದಲು ಸಲ ಬಿದ್ದಿದೆ. ಕ್ಯಾಂಪನ್ನಷ್ಟೇ ಅಲ್ಲ—ಆ ಸುತ್ತುಮುತ್ತಲಿನ ಪ್ರದೇಶವೆಲ್ಲವೂ ಹಿಮದಿಂದ ಆಚ್ಛಾದಿಸಲ್ಪಟ್ಟಿದ್ದರಿಂದ ಬಿಳಿ ಬಟ್ಟೆಯನ್ನು ಹೊದಿಸಿದಂತಿದೆ. ಎಲ್ಲ ಕಡೆಗೂ ಪ್ರಶಾಂತತೆ ನೆಲೆಗೊಳಿಸಿದೆ. ಗಾಳಿಯ ಸುಳಿವು ಸಹ ಇಲ್ಲ. ಅರ್ಧ ಮೈಲು ದೂರವಿರುವ ಐದನೇ ಕಂಪೌಂಡಿನ ಕಡೆಯಿಂದ ನಾಯಿಯ ಬೊಗಳುವಿಕೆಯು ಕೇಳಬಂದಿತು. ಕ್ರಿಸ್‌ಮಸ್ ಹಬ್ಬದ ಉದಯಕ್ಕಾಗಿ ಕಾಯ್ದು ಕುಳಿತಂಥ ಇಪ್ಪತ್ತೈದುಸಾವಿರ ಜನರ ಉಸಿರಾಡುವ ಸದ್ದಿನ ಹೊರತು ಬೇರಿನ್ನಾವ ಸಪ್ಪಳವೇ ಕೇಳಬರುತ್ತಿರಲಿಲ್ಲ. ದೂರದಲ್ಲಿ ಇದಕ್ಕೆ ತಾಳದ ಮೇಳವನ್ನು ಕೂಡಿಸುವ ಗತ್ತಿನಲ್ಲಿ ಸಮುದ್ರದ ತೆರೆಗಳು ಮಾತ್ರ ಕುಣಿಯುತ್ತಿದ್ದವು. ಇತ್ತ ಮುದುಕನು ಮಾತ್ರ ಗೊರ್‌ಗೊರ್ ನಿದ್ದೆ ಹೊಡೆಯುತ್ತ ತನ್ನ ಕೋಣೆಯಲ್ಲಿ ಮಲಗಿಕೊಂಡಿದ್ದಾನೆ.

ಮೋನಳೂ ಸಹ ದಾರಿಕಾಯುತ್ತಿದ್ದಳೆಂಬುದರಲ್ಲಿ ಸಂಶಯವೇ ಬೇಡ. ಅವಳು ಬನಾತನ್ನು ಅರ್ಧಮರ್ಧ ಹೊತ್ತುಕೊಂಡು ಆಡ್ಡಾ

ಗಿದ್ದಳು. ಆಕಳಿಕೆ, ತೂಕಡಿಕೆ ಕಾಡುತ್ತಿದ್ದರೂ ನಿದ್ರಾದೇವಿಯ ಕೃಪೆಯಾಗಿರಲಿಲ್ಲ. ಒಮ್ಮೆಲೆ ಅದೇಕೋ ಆಕೆಗೆ ರಾಜಿಯ ಗಡಿಯಾಳದ ನೆನಪಾಯಿತು. ಅದನ್ನು ತೆಗೆದು ಕೀಲಿಯನ್ನು ಕೊಡಬೇಕೆಂದು ವಿಚಾರ ಮಾಡುತ್ತಿರುವಷ್ಟರಲ್ಲಿಯೇ 'ಈಗ ಬೇಡ' ವೆಂಬ ಒಳನುಡಿಯೊಂದು ಅವಳನ್ನು ಎಚ್ಚರಿಸಿತು. ಪೀಲ್ ಪಟ್ಟಣದ ದೇವಾಲಯವು ಇಲ್ಲಿಗೆ ಅರ್ಧ ಮೈಲಾಗುತ್ತಿದ್ದರೂ, ಅಲ್ಲಿಯ ದೊಡ್ಡ ಗಡಿಯಾಳದ ಸಪ್ಪಳವು ಶಾಂತವಾದ ರಾತ್ರಿಯ ದಿನಗಳಲ್ಲಿ ಸ್ಪಷ್ಟವಾಗಿ ಕೇಳಿಸುತ್ತಿರುವದನ್ನು ಅವಳು ಅದೆಷ್ಟೋ ಸಲ ಕೇಳಿದ್ದಳು.

ಫ್ರಾನ್ಸದಲ್ಲಿಯ ರಣಾಂಗಣದ ಪ್ರತ್ಯಕ್ಷ ಚಿತ್ರವು ಅವಳ ಕಣ್ಮುಂದೆ ಕಟ್ಟಿದಂತಾಯಿತು. ದೇವರ ನಿಮಿತ್ತಾದರೂ ಒಡಂಬಡಿಕೆಯಂತೂ ಆಗಿತ್ತು. ತೋಫಿನ ಗುಡಗಾಟವಿಲ್ಲ; ಬಂದೂಕಿನ ಚಟಾಛಟಾಟವಿಲ್ಲ; ರಣಗರ್ಜನೆಯ ಸದ್ದಿಲ್ಲ. ತಮ್ಮತಮ್ಮ ಸ್ಥಳಗಳಲ್ಲಿ ಶಾಂತವಾಗಿ ಕುಳಿತ ಸೈನಿಕ ಸಮೂಹವು ಹಾಗೂ ಮೇಲೆ ಶಾಂತನಾದ ಚಂದ್ರಮನು; ಇದರ ಹೊರತು ಮತ್ತೇನೂ ಕಾಣಲಾರದು. ಏನು ದೇವರ ಮಹಿಮೆಯು! ಎಷ್ಟು ಅಗಾಧವಾದುದು!

೧೧॥ ಗಂಟೆಗೆ ಮೋನಳು ಎದ್ದು ಕಿಡಿಕಿಯೊಳಗೆ ಇಣಿಕಿ ನೋಡಿದಳು. ಪ್ರಯಾಸದಿಂದ ಪರಿತಪ್ತವಾದ ಜಗತ್ತಿನ ಮೇಲೆ ಶಾಂತವಾದ, ಗೂಢವಾದ ದೇವತಾಶಕ್ತಿಯೊಂದು ಕೆಳಗಿಳಿದುಬಂದಂತೆ ಭಾಸವಾಯಿತು. ಚಂದ್ರನ ಕಿರಣಗಳು ಅವಳ ಮುಖವನ್ನು ಮುತ್ತಿದವು. ಹಿಮದ ಮೇಲೆ ನಡೆದು ಹೋಗುವ ಕಟಾಕಟಾ ವೆಂಬ ಸಪ್ಪಳ ಮಾತ್ರ ಕೇಳಬಂದಿತು. ಕಾವಲುಗಾರರು ಅಧಿಕಾರಸ್ಥರ ಪಟಾಂಗಣದಲ್ಲಿ ತಮಗೆ ಗೊತ್ತುಮಾಡಲ್ಪಟ್ಟ ಸ್ಥಳಗಳನ್ನು ರಕ್ಷಿಸಲು ಹೊರಟಿದ್ದಾರೆಂದು ಅವಳು ಕಲ್ಪಿಸಿದಳು. ಅದಲ್ಲದೆ ಮತ್ತೂ ಹೆಜ್ಜೆಗಳ ಸಪ್ಪಳವು ಕೇಳಿಸಿತು. ತನ್ನ ಒಕ್ಕಲು ಮಕ್ಕಳೆಲ್ಲರೂ ಸಾಗಬರಬಹುದೆಂದು ಅವಳು ತರ್ಕಿಸಿದಳು.

ಪೀಲ್ ಪಟ್ಟಣದ ಗಡಿಯಾಳದ ಮಧ್ಯರಾತ್ರಿಯ ಗಂಟೆಯ ಮಂಜುಲ ನಿನಾದವು ಇಂಪಾಗಿ ಕೇಳಿಸಿತು. ಆಮೇಲೆ ಕಾವಲುಗಾರರ

ತೀರ ಸ್ಪಷ್ಟವಾದ ಬ್ಯಾಂಡಿನ ಸ್ವರದಲ್ಲಿ The feast of Stephen 'when the snow lay on the ground' ಎಂಬ ಹಾಡು ಕೇಳತೊಡಗಿತು.

ಓಸ್ಕಾರನೇ ವ್ಯವಸ್ಥಾಪಕನಾಗಿ ನಡೆಯುಸುತ್ತಿದ್ದ ೩ನೇ ಕಂಪೌಂಡಿನಿಂದ 'Deep and crisp and even' ಎಂಬ ಹಾಡು ಶಾಂತವಾದ ವಾತಾವರಣವನ್ನು ಸಿಸದಿಸತೊಡಗಿತು. ಆಮೇಲೆ ಮೊದಲನೆಯ ಕಂಪೌಂಡು. ನಂತರ ಸ್ವಲ್ಪ ದೂರವಿದ್ದ ೪, ೫ ನೆಯ ಕಂಪೌಂಡುಗಳೊಳಗಿಂದ ಹಾಡಿನ ಸ್ವರವು ಕೇಳಬಂದವು. ಇದಾದ ಮೇಲೆ ಎರಡನೆಯ ಸರತಿಯು ಸುರುವಾಯಿತು.

'Noel noel born is the king of Isarel' ಎಂಬ ಹಾಡು ಕ್ರಮಶಃ ಎಲ್ಲ ಕಂಪೌಂಡಿನಲ್ಲಿಯೂ ಬಾರಿಸಲಾಯಿತು. ಹೀಗೆ ಪ್ರತಿಯೊಂದು ಕಂಪೌಂಡಿನ ಎರಡನೆಯ ಸರತಿಯು ಮುಗಿದ ಮೇಲೆ ಕಟ್ಟಕಡೆಗೆ ಇವಳಿ ಸೂಚಿಸಿದ ಹಾಡನ್ನು ಎಲ್ಲ ಕಂಪೌಂಡಿನವರು ಏಕಕಾಲಕ್ಕೆ ಬಾರಿಸತೊಡಗಿದರು.

'Lead kindly light, amid the encircling gloom' 'ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ ಕೈಹಿಡಿದು ನಡೆಸೆನ್ನನು' ಎಂಬುದನ್ನು ಪ್ರಾರಂಭಿಸಿದರು. ಕೇಳುವದೇನು ? ಏಕಸ್ವರದಿಂದ ಬಂದ ಸಂಗೀತವು ಅದೆಷ್ಟೊ ಹೊತ್ತಿನವರೆಗೆ ವಾತಾವರಣವನ್ನು ನಾದಮಯವನ್ನಾಗಿಸಿತು.

ಮೋನಳ ಕಣ್ಣು ನೀರಿನಿಂದ ತುಂಬಿದವು; ಬಿಕ್ಕಿಸಿ ಅಳತೊಡಗಿದಳು. ತಾನೇಕೆ ಈ ಹಾಡನ್ನು ಅವನಿಗೆ ಸೂಚಿಸಿದೆ? ಅವನೇಕೆ ಈ ಹಾಡನ್ನು ಹಾಡಿಯೇ ತೀರಿಸಿದನು? ಇವೇ ಮೊದಲಾದ ವಿಚಾರಗಳು ಅವಳನ್ನು ಬಾಧಿಸತೊಡಗಿದವು. ನಿಜವಾದ ಶಾಂತತೆಯು ದೊರೆಯಬೇಕಾದರೆ, ಬಂಧನದ ಜೋಡಿಯು ಕತ್ತರಿಸಬೇಕು! ಅಂದರೆ ಶಾಂತಿಯು ನೆಲೆಗೊಳ್ಳುವದು. ದೇವರೇ! ಅದನ್ನಷ್ಟು ನೀನು ದಯಪಾಲಿಸಲಾರೆಯಾ? ದಯಪಾಲಿಸು. ದಯಪಾಲಿಸದಿರಬೇಡ ಎಂಬ ಉದ್ಗಾರವು ಅವಳ ಬಾಯಿಯಿಂದ ಹೊರಟಿತು.

ಇವಳು ಬಿಸುಸುಯ್ಯುವ ಉಸಿರಿನಿಂದ ಕನ್ನಡಿಯ ಪಡಕುಗಳು ಮುಂಜವಾದವು. ಆದಾರೋ ಒಬ್ಬರು ಬರುತ್ತಿರುವ ಸದ್ದು ಅಸ್ಪಷ್ಟವಾಗಿ ಕಂಡಿತು. ಅವನೊಬ್ಬ ಗಂಡಸು. ಎಡವುತ್ತ, ತಡವರಿಸುತ್ತ, ಕುಡಿದು ದುಂದಾದವನಂತೆ ಹೆಜ್ಜೆಗಳನ್ನು ಹಾಕುತ್ತಿದ್ದನು. ಅವನು ಹೊರಬಾಗಿಲಲ್ಲಿಯೆ ಬಂದನು. ಸತ್ಯದ ಅರ್ಧಮರ್ಧ ಜ್ಞಾನವಿದ್ದು, ಸಂಪೂರ್ಣ ಬಲ್ಲೆವೆಂದು ನಟಿಸುವವರಂತೆ ಅವಳು ನಡುಗುತ್ತ ಕೆಳಗಿಳಿದು ಬಂದು ಬಾಗಿಲವನ್ನು ತೆರೆದಳು.

ಮೇಜಿನ ಮೇಲಿರಿಸಿದ್ದ ದೀಪದ ಬೆಳಕಿನಿಂದ ಅವನಾರೆಂಬುದನ್ನು ಕೂಡಲೆ ಗುರುತಿಸಿದಳು. ಓಸ್ಕಾರ್ ಹಾಯಿನ್‌ನ ಹೊರತು ಮತ್ತಾರಿರಬೇಕು? ಅವನು ಬಾಗಿಲ ಮುಂದಿನ ಕಮಾನಿನ ಮೇಲೆ ಬೆಳೆದ ಬಳ್ಳಿಯನ್ನು ಒಂದು ಕೈಯಿಂದ ಹಿಡಿದಿದ್ದನು; ಇನ್ನೊಂದರಲ್ಲಿ ನೀಲಿಯ ಬಣ್ಣದ ಕಾಗದವಿತ್ತು. ಬೆವರಿನಿಂದ ತೊಯ್ದ ತನ್ನ ಹಣೆಯನ್ನೊರಸಿಕೊಳ್ಳಲು ಟೊಪ್ಪಿಗೆಯನ್ನು ಅವನು ಹಿಂದಕ್ಕೆ ಸರಿಸಿಕೊಂಡು:

'ನಾನು ಒಳಗೆ ಬರಲೆ?'

'ಅದರಲ್ಲೇನು, ಬರಬಹುದು.'

ಎಂದೂ ಮನೆಯೊಳಗೆ ಕಾಲಿಕ್ಕದವನು ಅಂದು ಒಳಕ್ಕೆ ಬಂದನು. ಅಗ್ಗಿಷ್ಟಿಗೆಯಲ್ಲಿಯ ಬೆಂಕಿಯು ಆರುತ್ತ ಬಂದಿತ್ತು. ಬದಿಯಲ್ಲಿಯೇ ಇರಿಸಿದ್ದ ಮುದುಕನ ಆರಾಮುಕುರ್ಚಿಯ ಮೇಲೆ ಅವನು ಒಮ್ಮೆಲೆ ದೊಪ್ಪನೆ ಬಿದ್ದುಕೊಂಡನು.

'ಅದೇನು?' ಎಂದು ಅವಳು ಕೇಳಿದಳು.

'ನೋಡು' ಎಂದವನೆ ತನ್ನ ಕೈಯಲ್ಲಿಯ ಕಾಗದವನ್ನು ಅವಳಿಗೆ ತೋರಿಸಿದನು. 'ಅದು ಇದೀಗ ಬಂದಿದೆ; ಇಂದು ಟಪಾಲು ಬಹು ತಡವಾಗಿ ಬಂದಿತು' ಎಂದು ಹೇಳುತ್ತಿರುವಷ್ಟರಲ್ಲಿಯೇ ಅವನ ದನಿಯು ಕುಗ್ಗಿತು.

ಮೋನಳು ಕಾಗದವನ್ನು ತೆಗೆದುಕೊಂಡಳು; ಇಂಗ್ಲಿಷಭಾಷೆಯಲ್ಲಿದ್ದುದನ್ನು ಕಂಡು, ದೀಪದ ಬೆಳಕಿಗೆ ಹಿಡಿದು ಗಟ್ಟಿಯಾಗಿ ಓದಲಾ

ರಂಭಿಸಿದಳು—' ಅಮೇರಿಕನ್ ಕಾನ್‌ಸೋಲೇಟ್—' ನ್ಯಾಸ್‌ಹೇಯಿವ್ '

'ಇದನ್ನು ತಿಳಿಸಲು ವಿಷಾದಪಡ. . '

' ಬೇಡ ! ಬೇಡ ! ಓದಬೇಡ !' ಎಂದವನು ದುಃಖಿಸುತ್ತಿದನು.

ಮೋನಳು ತನ್ನಷ್ಟಕ್ಕೆ ಉಳಿದ ಪತ್ರವನ್ನು ಓದಿಕೊಂಡಳು. ಅದು ' ಅಮೇರಿಕನ್ ಕಾನ್‌ಸಲ್ ' ಎಂಬ ಪತ್ರವು. ಒಂದು ಮಧ್ಯರಾತ್ರಿಯಲ್ಲಿ ಬ್ರಿಟಿಶ್ ವಿಮಾನಗಳು ಓಸ್ಕಾರನ ತಾಯಿ ಮತ್ತು ತಂಗಿಯು ಇರುತ್ತಿದ್ದ ಮನೆಯ ಮೇಲೆ ಬಾಂಬುಗಳ ಸುರಿಮಳೆಗರೆದವು. ಓಸ್ಕಾರನ ತಂಗಿಯು ಮಲಗಿಕೊಂಡಿದ್ದ ಕೋಣೆಯ ಭಾಗವೆಲ್ಲವೂ ಧ್ವಂಸವಾಗಿದೆ ಎಂಬ ಸುದ್ದಿಯು ಅದರಲ್ಲಿತ್ತು. ಮೋನಳು ಹೌಹಾರಿ ಚೀರಿಕೊಂಡಳು.

' ಹುಡುಗಿಯ ಸುಳಿವೇ ಇಲ್ಲ; ಬಹುಶಃ . . . . .' ಎಂದು ಗಟ್ಟಿಯಾಗಿ ಓದಿದಳು.

' ಬೇಡ ! ಬೇಡ ! ನಾನು ಕೇಳಲಾರೆ.'

ತುಸು ಹೊತ್ತು ಇಬ್ಬರೂ ಸ್ತಬ್ಧರಾದರು. ಓಸ್ಕಾರನ ನಿಟ್ಟುಸಿರಿನಿಂದಲೂ, ಮೋನಳ ದೀರ್ಘಶ್ವಾಸೋಚ್ಛ್ವಾಸದಿಂದಲೂ ಶಾಂತತೆಯು ಭಂಗವಾಯಿತು.

' ನಿನ್ನ ತಂಗಿಯೆ ?'

' ಹೌದು. ಅಂದಿನ ರಾತ್ರಿಯೇ ಅವಳ ಬಗ್ಗೆ ನಿನಗೆ ಹೇಳಬೇಕೆಂದು ಮಾಡಿದ್ದೆ. . . .'

' ಹೌದು. ನನಗೀಗ ನೆನಪಾಯಿತು ' ಎಂದು ತಲೆಯನ್ನು ತುರಿಸಿಕೊಳ್ಳುತ್ತ ಮಾತನಾಡಿದಳು.

' ಇನ್ನೂ ಹತ್ತು ತುಂಬಿರಲಿಲ್ಲ. ಎಳೆ ಜೀವನ. ಅವಳನ್ನು ಬಿಟ್ಟರೆ ನನಗೆ ಜಗತ್ತಿನಲ್ಲಿ ಅಷ್ಟೊಂದು ಪ್ರಿಯಕರವಾದ ಇನ್ನೊಂದು ಬೇರೆ ಯಾವ ವಸ್ತುವೂ ಇಲ್ಲ. ಅವಳೆ ನನ್ನ ಸರ್ವಸ್ವ. ಅವಳೆಂದರೆ ನನಗೆ ಬಲು ಪ್ರೀತಿ. ಪ್ರತಿವಾರವೂ ಪತ್ರಗಳನ್ನು ಬರೆಯುತ್ತಿದ್ದಳಲ್ಲದೆ ತಾನು ತೆಗೆದ ಚಿತ್ರಗಳನ್ನೂ ನನಗಾಗಿ ಕಳಿಸುತ್ತಿದ್ದಳು. ನನ್ನ ತಂದೆಯು ತೀರಿಕೊಂಡಾಗ, ಅವಳಿನ್ನೂ ತೀರ ಚಿಕ್ಕ ಮಗು; ಅಂದಿನಿಂದ ನನ್ನನ್ನೆ ಅಣ್ಣ

ನೆಂದೂ, ತಂದೆಯೆಂದೂ ಸಹ ಭಾವಿಸಿಕೊಂಡಿದ್ದಳು. ಈಗೇನು ಮಾಡು ವದು....ನಮ್ಮ ದೈವ ಕೆಟ್ಟದು.'

ಮೋನಳು ಸುಮ್ಮನೆ ಕುಳಿತುಕೊಂಡು ಅವನು ಹೇಳುತ್ತಿರುವು ದನ್ನು ದಂಗುಬಡಿದವರಂತೆ ಕೇಳುತ್ತಿದ್ದಳು.

ಎರಡೂ ಕೈಗಳಿಂದ ಅವನು ತನ್ನ ತಲೆಯನ್ನು ಹಿಡಿದುಕೊಂಡನು. ಅವನ ಬೆರಳುಗಳ ಸಂದುಗಳೊಳಗಿಂದ, ನೀರು ಧಾರೆಯಾಗಿ ಹರಿಯುತ್ತಿ ರುವುದು ಮೋನಳ ಕಣ್ಣಿಗೆ ಬಿತ್ತು.

'ಮಿಗ್ನಾನ್, ತಂಗೀ—ಮಿಗ್ನಾನ್' ಎಂದು ಹಲುಬುತ್ತಿದ್ದನು. ಮೋನಳು ಬೆಪ್ಪುಬಡಿದಂತೆ ಕೂತಿದ್ದಳು. ಕಟ್ಟಕಡೆಗೆ ಅವನೆ 'ಅಲ್ಲಿ ಅಂದು ಯಾರೂ ಇರಲಿಲ್ಲವಂತೆ. ಅನಾಥಳಾಗಿ..ನನ್ನ ತಂಗಿಯು..' ಎಂದು ಹೇಳಹೇಳುತ್ತ ಓಸ್ಕಾರನು ತತ್ತರಿಸುತ್ತ ಎದ್ದು ನಿಂತನು.

ಅವನ ಮುಖವು ತೀರ ಸಣ್ಣದಾಗಿತ್ತು; ಬಾಡಿತ್ತು. ಹೊರಡ ಲನುವಾಗಿದ್ದನು. ಮೋನಳಿಗೆ ಮಾತ್ರ ಇನ್ನು ಮೇಲೆ ತಡೆಯುವದಾಗ ಲಿಲ್ಲ. ನಿಗ್ರಹಿಸಲಸಾಧ್ಯವಾದ ತೀವ್ರ ಸಂವೇದನೆಯಿಂದ ಅವನ ಕುತ್ತಿ ಗೆಯ ಸುತ್ತ ಅವಳು ತನ್ನ ಕೈಗಳೆರಡನ್ನೂ ಹಾಕಿ ತಬ್ಬಿಕೊಂಡಳು.

ಇಷ್ಟು ಹೊತ್ತಿಗೆ, ಬ್ಯಾಂಡಿನ ದನಿಗೆ ಮಲಗಿದ ಮುದುಕನಿಗೆ ಎಚ್ಚರವಾಯಿತು; ಕೇಳಬೇಕೆಂದು ಎದ್ದು ಕುಳಿತನು. ಮೊದಮೊದಲು ಆ ಕ್ಯಾಂಪಿನೊಳಗಿನ ಸಂಗೀತವು ಅವನ ಹೃದಯವನ್ನು ಅಲುಗಿಸಿತ್ತು. ಆದರೆ, ಕೆಲಹೊತ್ತಿನ ಮೇಲೆ ಅವನ ಹೃದಯವು ತೀರ ಕಹಿಯಾಗಿ ಕಲಕ ಮಲಕಾಯಿತು. ರಾಬಿಯ ವಿಚಾರವು ಅವನ ತಲೆಯಲ್ಲಿ ಜಾಗೃತ ವಾಯಿತು. ಯುದ್ಧವು ಇನ್ನೂ ನಡೆಯುತ್ತಿರುವಾಗ ಶಾಂತಿಪಾಠವನ್ನು ಹೇಳುವದರ ಮತಿತಾರ್ಥವೇನು? ಶಾಂತಿಯೇ? ದೇವರು ತನ್ನ ಅನಂತ ವಾದ ಶಕ್ತಿಯಿಂದ ವೈರಿಗಳ ಸಮೂಲನಾಶವನ್ನು ಮಾಡದ ಹೊರತು ಎಂದಿಗೂ ಶಾಂತಿಯು ನೆಲೆಗೊಳ್ಳಲಾರದು.

ಕೆಳಗೆ ಬಾಗಿಲಲ್ಲಿ ಅದಾರೋ ಮಾತನಾಡುವ ಸದ್ದು ಅಡುಗೆಯ ಮನೆಯ ಕಡೆಯಿಂದ ಕೇಳಬಂದಿತು. ಕಿವಿಗೊಟ್ಟು ಕೇಳಲಾಗಿ ಗಂಡು—

ಹೆಣ್ಣಿನ ಧ್ವನಿಯೆಂದು ಸಂಶಿಗೆಯಾಯಿತು. ಹೆಣ್ಣು ಧ್ವನಿಯು ಮೋನಳ ದೆಂದೇ ಕೂಡಲೆ ಗುರುತುಹತ್ತಿತು. ಇನ್ನೊಂದು ಧ್ವನಿಯು ಗಡುಸಾಗಿತ್ತು. ಯಾವನದಿರಬಹುದೆಂಬ ಸಂಶಯವು ಅವನನ್ನು ದಿಗಿಲುಗೊಳಿಸಿತು.

ಕ್ರಿಸ್‌ಮಸ್ ದಿನಗಳಲ್ಲಿ ಸಾಂಕ್ಸ ಹುಡುಗೆಯರು ಹಾಗೆ ಸಿಲ್ಲುವ ಪದ್ಧತಿಯಂತೆ ಯಾವಳೋ ನಿಂತಿರಬೇಕೆಂಬ ಕಲ್ಪನೆಯೂ ಬಂದಿತು. ಆದರೂ ಅವನ ತಲೆಯಲ್ಲಿ ಕೆಟ್ಟಕೆಟ್ಟ ವಿಚಾರಗಳು ಸುಳಿದಾಡತೊಡಗಿದವು.

ಹಾಸುಗೆಯಿಂದ ಒದ್ದಾಡುತ್ತ ಎದ್ದು, ಕೈಕೋಲಿಗಾಗಿ ಅತ್ತಿತ್ತ ಜೋಲಿ ಹೊಡೆಯುತ್ತ ಹುಡುಕಾಡಿ, ಕೈಯಲ್ಲಿ ಹಿಡಿದುಕೊಂಡು ಪಾವಟಿಗೆಗಳಿನ್ನಿಳಿಯತೊಡಗಿದನು. ಪಾವಟಿಗೆಗಳ ಮೇಲೆ ಕತ್ತಲು ಕವಿದಿತ್ತು. ಕೆಳಬದಿಯಲ್ಲಿ ದೀಪವುರಿಯುತ್ತಲಿದೆ. ಶ್ರಮಬಡುತ್ತ ಪಾವಟಿಗೆಗಳನ್ನು ಸಾವಕಾಶವಾಗಿ ಇಳಿಯುತ್ತ ಮುದುಕನು ಕೆಳಬಂದು ಬಿಟ್ಟನು.

ಅವರಿಬ್ಬರೂ ಪರಸ್ಪರರ ತೋಳ-ತೆಕ್ಕೆಯೊಳಗೆ ಎಷ್ಟು ಹೊತ್ತಿನವರೆಗೆ ಇದ್ದರೋ ಹೇಳಲು ಬರುವಂತಿಲ್ಲ. ಅಷ್ಟರಲ್ಲಿ ಅಕಸ್ಮಾತ್ತಾಗಿ ಕಾಲು ಹೆಜ್ಜೆಯ ಸಪ್ಪಳವು ಅವರ ಬೆನ್ನಹಿಂದಿನಿಂದ ಕೇಳಬಂದಿತು. ಮೋನಳು ಕಕ್ಕಾಬಿಕ್ಕಿಯಾಗಿ ಹಿಂದಿರುಗಿ ನೋಡಿದಳು. ಅವಳ ತಂದೆಯೇ ಹೊಸ್ತಿಲ ಮೇಲೆ ನಿಂತಿದ್ದನು.

ಮುದುಕನ ಮುಖವು ಕೆಂಜಗವಾಯಿತು. ಕಣ್ಣು ಕೆರಳಿದವು. ತುಟಿಗಳು ನಡುಗುತ್ತಿದ್ದವು. ಆಪಾದಮಸ್ತಕಪರ್ಯಂತ ಅವನ ಮೈಯು ಕಂಪಿಸುತ್ತಿತ್ತು. ಉಸಿರು ಕಟ್ಟಿದಂತಾಗಿ ಅವನ ಬಾಯಿಯಿಂದ ಧ್ವನಿಯೇ ಹೊರಡಲಿಲ್ಲ. ತುಸುಹೊತ್ತಿನ ಮೇಲೆ ಮುದುಕನ ಬಾಯುಪ್ರಸಾದಕ್ಕಾರಂಭವಾಯಿತು.

'ಹುಚ್ಚುಮುಂಡೇ, ಬೀದೀ ಬಸವೀ, ನಿನ್ನಲ್ಲಾದ ಬದಲಾವಣೆ ಇದೆಯೇ! ನಿನ್ನ ಅಣ್ಣನು ಯುದ್ಧದಲ್ಲಿ-ಅನಾಥನಾಗಿ ಪರದೇಶದಲ್ಲಿ

ಪ್ರಾಣಕ್ಕೆರವಾದರೆ, ನೀನು ಈ ಜರ್ಮನ್ನನ ಬಾಹುಬಂಧನದಲ್ಲಿ ನಲಿದಾಡುತ್ತಿರುವಿಯಲ್ಲ! ದೇವರು ನಿನಗೆ ಯೋಗ್ಯ ಶಿಕ್ಷೆಯನ್ನು ಕೊಡದಿರಲಾರನು. ಪರಲೋಕದಲ್ಲಿಯ ನಿನ್ನ ಅಣ್ಣನ ಆತ್ಮವು ಹಗಲು ರಾತ್ರಿ ನಿನ್ನನ್ನು ಬೆನ್ನಟ್ಟಿ ನಾಶಗೊಳಿಸಲಿ! ದೇವರೇ, ನನ್ನ ಶಾಪವು ನಿರರ್ಥಕವಾಗದಿರಲಿ!' ಎಂದು ಮುದುಕನು ಸಿಟ್ಟಿನ ಆವೇಶದಿಂದ ಮಾತನಾಡಿದನು.

ಮುದುಕನ ಧ್ವನಿಯು ಕುಗ್ಗಿತು. ಮುಖವು ಬಣ್ಣಗೆಟ್ಟಿತು. ಅವನು ನಡುಕದಿಂದ ತತ್ತರಿಸಹತ್ತಿದನು. ಅವನ್ನು ಕಂಡು ಮೋನಳು ಒಕ್ಕಲುಮಕ್ಕಳನ್ನು ಕರೆದು, ಮುದುಕನನ್ನು ಮೆಲ್ಲನೆ ಹೊತ್ತುಕೊಂಡು ಅವನ ಕೋಣೆಗೆ ಒಯ್ಯಬೇಕೆಂದು ಆಜ್ಞಾಪಿಸಿದಳು. ಅದರಂತೆ ಅವರು ಅವನನ್ನು ಹಾಸುಗೆಯ ಮೇಲೆ ಮಲಗಿಸಿದರು. ಬಾಗಿಲವು ತೆರೆದದ್ದರಿಂದ ಮುದುಕನ ಸತತವಾದ ನಿಟ್ಟುಸಿರು ಬಿಸಿಗಾಳಿಯು ಸೋಂಕಿದಂತೆ ಅವಳಿಗೆ ತಟ್ಟುತಿತ್ತು. ಮುದುಕನಿಗೆ ಎಚ್ಚರತಪ್ಪಿ ಹೋಗಿತ್ತು.

ಮೋನಳಿಗೆ ನೆತ್ತಿಯ ಸುಳಿಯ ಮೇಲೆ ಬಲವಾದ ಹೊಡೆತ ಬಿದ್ದಂತಾಯಿತು. ಅವಳೂ ಭ್ರಮಿಷ್ಟಳಾದಳು. ಅವಳಿಗೆ ಕೇಡುಗಾಲ ಒದಗಿ ಬರುವ ಪೂರ್ವಚಿನ್ಹಗಳು ತಲೆದೋರಿದವು. ಸ್ಮೃತಿಯು ಮೇಲೆ ಬರಲು ಸುತ್ತುಮುತ್ತು ಕಣ್ತೆರೆದು ನೋಡಿದಳು. ಒಸ್ಕಾರನೂ ಕಾಣಿಸಲಿಲ್ಲ. ಅವನು ಯಾವಾಗಲೋ ಹೊರಟುಹೋಗಿದ್ದನು.

---

# ಅಪರಾಧಿ

ಅಂದಿನಿಂದ ಮುದುಕನ ಬಾಯಿ ಹೋಗಿಬಿಟ್ಟಿತು; ತಿರುಗಿ ಬರಲೇ ಇಲ್ಲ. ಕೊನೆಯ ಉಸಿರಿನವರೆಗೂ ಅವನ ಹತ್ತಿರ ಕುಳಿತ ಮೋನಳು ಸ್ಥಳಬಿಟ್ಟು ಕದಲಲಿಲ್ಲ. ತಂದೆಗೆ ಸ್ಮೃತಿಯು ಬರಲೆಂದು ಭಕ್ತಿಪೂರ್ವಕವಾಗಿ ದೇವರನ್ನು ಒಂದೇಸಮನೆ ಪ್ರಾರ್ಥಿಸಿದಳು. ಆದರೆ ತಪ್ಪಿದ ಎಚ್ಚರವು ಮರಳಲಿಲ್ಲ; ಬರಲಾರದೆಂದು ತಿಳಿದೂ ಬಿಟ್ಟಿದ್ದಳು.

ತಂದೆಯ ಮರಣದಿಂದ ಅವಳಿಗುಂಟಾದ ದುಃಖವು ಅಷ್ಟಿಷ್ಟಲ್ಲ. ಅದರಲ್ಲಿಂತಲೂ ತಾನು ಮಾಡುತ್ತಿರುವದು ಅನ್ಯಾಯವೆಂದು ತಿಳಿಸಿ ಮುದುಕನ ಮನಸ್ಸು ಬದಲಾಯಿಸಲಿಲ್ಲವಲ್ಲ—ಎಂದು ಅವಳು ಬಹು ಮಿಡುಕಿದಳು. ಕೊನೆಯ ಸಮಯದಲ್ಲಿ ಒಬ್ಬಳೇ ಇದ್ದಳು. ಕೊನೆ ಬಿಕ್ಕು ಬಂದಾಗ ಸ್ವಾಭಿಮಾನತೆಯಿಂದ ಮೋನಳು 'ತಂದೆಯೇ, ನನ್ನಿಂದ ಸಾಧ್ಯವಾಗದೆ ಹೋಯಿತು. ಏನು ಮಾಡಲಿ?' ಎಂದು ಗಟ್ಟಿಯಾಗಿ ತಂದೆಯ ಕಿವಿಯಲ್ಲಿ ಕೂಗಿಕೊಂಡಳು. ಆದರೆ ಉಪಯೋಗವೇನು?

ಕರ್ಕಪಾರ್ಕಿನಲ್ಲಿ ಕ್ರೇನ್‌ಮನೆತನದ ಗೋರಿಗಳ ಸಾಲಿನಲ್ಲಿ ಮುದುಕನನ್ನು ಹೂಳಿದರು. ಆಪ್ತೇಷ್ಟರೆಲ್ಲ ಮೋನಳನ್ನು ಮಾತನಾಡಿ ಸಲು ಬಂದರು; ಅವರಲ್ಲನೇಕರ ಪರಿಚಯವೇ ಅವಳಿಗಿರಲಿಲ್ಲ. ನಾಲ್ಕು ನಾಲ್ಕು ತಲೆ ದೂರಾದ ಬಳಗದಿಂದಲೂ ಚಿಗಪ್ಪ, ಚಿಗವ್ವ, ಅಣ್ಣ—ತಮ್ಮ ಮೊದಲಾದವರು ಬಂದಿದ್ದರು. ವಿಧ್ಯುಕ್ತವಾಗಿ ಅಂತ್ಯವಿಧಿಯು ಸಾಂಗ ವಾದನಂತರ ಕ್ಯಾಂಪಿನ ಅಧಿಕಾರಿಗಳ ಅಪ್ಪಣೆಯನ್ನು ಪಡೆದುಕೊಂಡು ಅವರೆಲ್ಲರೂ ಒಕ್ಕಲುಮನೆಗೆ ಒಂದರು. ರಾಜಿಯ ಮರಣವಾರ್ತೆ ತಿಳಿದ ಮೇಲೆ, ಮುದುಕನು ಮೃತ್ಯುಪತ್ರವನ್ನೊಂದು ಬರೆದಿಟ್ಟಿದ್ದನು. ಪಂಚರು ಅದನ್ನು ಒಡೆದು ಓದಿದರು: 'ನನ್ನ ಇದ್ದಬಿದ್ದ ಎಲ್ಲ ಆಸ್ತಿಯನ್ನು ನನ್ನ ಮಗಳಿಗೆ ಕೊಟ್ಟಿದ್ದೇನೆ' ಎಂಬ ಒಂದೇ ಒಂದು ವಾಕ್ಯವಿತ್ತು. ಬಂದಂಥ ಆಪ್ತರೆಲ್ಲರೂ ವಿಸ್ಮಯಚಕಿತರಾದರು. ತಮಗೆ ನಿಜವಾಗಿಯೂ ಆ ಆಸ್ತಿ ಯಲ್ಲಿ ಏನೂ ದೊರೆಯುವ ಹಕ್ಕಿಲ್ಲದಿದ್ದರೂ, ಮುದುಕನ ಸ್ವಾರ್ಥವನ್ನು ಕಂಡು ಅವರೆಲ್ಲರು ಉದ್ವಿಗ್ನಮನಸ್ಕರಾದರು.

'ಪಂಚರೇ, ಬೇರೆಯವರಾರಿಗೂ ಆಸ್ತಿಯನ್ನು ಹಂಚಿಕೊಟ್ಟಿಲ್ಲವೇ' ಎಂದು ಸುಮ್ಮನಿರದೆ ಅವರು ವಿಚಾರಿಸದೆ ಬಿಡಲಿಲ್ಲ.

'ಯಾರಿಗೂ, ಏನೂ ಇಲ್ಲ' ಎಂದು, ಪಂಚರು ನೋಡಿಕೊಳ್ಳಲು ಮೃತ್ಯುಪತ್ರವನ್ನು ಅವರಿಗೆ ಕೊಡಹೋದರು.

'ಅಷ್ಟೇನು ಬೇಡ, ವಿಶ್ವಾಸವಿದೆ. ಚನ್ನಾಗಿ ಓದಿರುವಿರಷ್ಟೆ?'

'ತಪ್ಪು ಓದುವ ಸಂಭವವಿದೆಯೇ? ಎಲ್ಲವೂ ಮೋನಳೊಬ್ಬಳಿಗೇ

ಸಲ್ಲತಕ್ಕದ್ದು' ಎಂದು ಪಂಚರು ಗಟ್ಟಿಯಾಗಿ, ಸ್ಪಷ್ಟವಾಗಿ ಎಲ್ಲರಿಗೂ ಕೇಳುವಂತೆ ಕೂಗಿಕೊಂಡರು.

'ಹಾಗಿದ್ದರೆ ಅವಳಿಗೇ ಈ ಆಸ್ತಿಯೆಲ್ಲವನ್ನು ಬಿಟ್ಟುಬಿಡುತ್ತೇವೆ' ಎಂದವರು ಏಳತೊಡಗಿದರು. ಅವರು ಮನೆಯನ್ನು ದಾಟಿ ತುಸು ಮುಂದೆ ಹೋದ ಬಳಿಕ ತಮ್ಮತಮ್ಮೊಳಗೆ ಏನನ್ನೋ ಗೊಣಗುಡುತ್ತ ತಮ್ಮ ಮನೆಗಳ ದಾರಿಯನ್ನು ಹಿಡಿದರು. ಅಣಕವಾಡಿದ ಒಂದೆರಡು ಮಾತುಗಳೂ ಮೋನಳ ಕಿವಿಗೆ ಬಿದ್ದವು.

ಅಂದು ರಾತ್ರಿ, ಆರಲು ಬಂದಂಥ ಅಗ್ಗಿಷ್ಟಿಗೆಯ ಮುಂದೆ ಬಹಳ ಹೊತ್ತಿನವರೆಗೆ ಮೋನಳು ಕುಳಿತುಕೊಂಡಿದ್ದಳು. ಬೀದಿಯಲ್ಲಿ ಆದಾರೋ ಮಾತಾಡುತ್ತಿದ್ದಂಥ ಸದ್ದಾಯಿತು. ಅವರು ಆಳುಮಕ್ಕಳಲ್ಲದೆ ಬೇರೆ ಯಾರೂ ಆಗಿರಲಿಲ್ಲ. ಕ್ರಿಸ್‌ಮಸ್‌ದಲ್ಲಿ ಅವಳ ತಂದೆಯು ಮೋನಳನ್ನು ಬಹುವಾಗಿ ಜರಿದುದನ್ನು ಅವರು ಕೇಳಿದ್ದರು. ಅಂದಿನಿಂದ ಅವರೆಲ್ಲರೂ ಮೋನಳ ವಿಷಯದಲ್ಲಿ ಅಲ್ಲದ–ಸಲ್ಲದ ಅನೇಕ ಸುದ್ದಿಗಳನ್ನು ಹುಟ್ಟಿಸಿ ಹರಡಿದ್ದಾರೆ. ತಮ್ಮ ಮುಂದಿನ ಬಾಳುವೆಗಾಗಿ ಹಲವು ತರದ ಹಂಚಿಕೆಗಳನ್ನು ಹಾಕತೊಡಗಿದ್ದಾರೆ.

'ಹೆಚ್ಚಿಗೇನು ಹೇಳುವದು? ಎಷ್ಟೆಂದರೆ ಅಷ್ಟೆ. ಅವಳು ತಂದೆಯನ್ನು ಕೊಂದಂಥ ಪಾಪಿಯಿದ್ದಾಳೆ.'

'ಮುದುಕನ ಮರಣಕ್ಕೆ ಇವಳೇ ಕಾರಣಳು.'

'ಇಂಥ ಹೇಸಿಗೆಲಸವನ್ನು ಮಾಡಿದಂಥವಳ ಕೈಕೆಳಗೆ ನಾನಿನ್ನು ದುಡಿಯಲಾರೆ'

'ನೀನು ಬಿಟ್ಟಮೇಲೆ ನಾನೂ ಬಿಡತಕ್ಕವನೆ' ಎಂದು ಮುಂತಾಗಿ ಆ ಆಳುಗಳು ತಮ್ಮ ತಮ್ಮೊಳಗೆ ಮಾತಾಡಿಕೊಂಡು ಒಂದು ನಿರ್ಧಾರಕ್ಕೆ ಬರಬೇಕೆಂದು ಚರ್ಚಿಸುತ್ತಿದ್ದರು.

ಒಂದು ವಾರ ಕೂಡ ಮುಗಿದಿರಲಿಲ್ಲ. ಎಲ್ಲ ಆಳುಗಳು ಒಬ್ಬೊಬ್ಬರಾಗಿ ಅವಳ ಹತ್ತಿರ ಬಂದು, ತಮ್ಮ ಬಿಡುಗಡೆಗಾಗಿ ನಾನಾತರದ ಕುಂಟು ನೆವಗಳನ್ನು ಅವಳ ಮುಂದೆ ತೋಡಿಕೊಳ್ಳಹತ್ತಿದರು. ಅವಳು

ಅವರ ಯಾವ ಕಾರಣಗಳನ್ನು ವಿಚಾರಿಸದೆ ಅವರಿಗೆ ಸಲ್ಲತಕ್ಕ ಸಂಬಳ ವನ್ನು ಕೊಟ್ಟು ಬೇಕಾದಲ್ಲಿಗೆ ಹೋಗಬಹುದೆಂದು ಹೇಳಿ ಎಲ್ಲರಿಗೂ ಅಪ್ಪಣೆಕೊಟ್ಟುಬಿಟ್ಟಳು.

ಇಡಿಯ ಮನೆಯಲ್ಲಿ ಅವಳೊಬ್ಬಳೆ ಇರಹತ್ತಿ ಮೂರು ದಿನಗಳಂತೂ ಕಳೆದುವು. ಮೋನಳೊಬ್ಬಳೇ ಇರುವುದನ್ನರಿತು ಅಂತಃಕರಣವುಳ್ಳ ಕಮಾಂಡಂಟನು ತಾನೇನಾದರೂ ಅವಳಿಗೆ ಸಹಾಯಮಾಡಬೇಕೆಂಬಿಚ್ಛೆ ಯಿಂದ ಅವಳ ಮನೆಗೆ ಬಂದು :

'ಕೆಲವು ಕಾವಲುಗಾರರನ್ನು ಕಳುಹಿಸಿ ಕೊಡಲೆ?' ಎಂದು ವಿಚಾರಿಸಿದನು.

'ಬೇಡ, ಬೇಡ. ಕಾರಣವಿಲ್ಲ.'

'ಕೆಲವು ಜರ್ಮನ್ನರನ್ನು ?'

'ಬೇಡ, ಯಾರೂ ಬೇಡ.'

'ತಂಗೀ, ನೀನೊಬ್ಬಳೇ ಈ ಹೊಲದ ವ್ಯವಸ್ಥೆಯನ್ನು ನೀಗಿಸಿ ಕೊಳ್ಳಲಾರಿ.'

'ನೀಗಿಸಿಕೊಳ್ಳದೇನು? ನನ್ನಲ್ಲಿ ಅಷ್ಟು ಶಕ್ತಿಯಿದೆ. ನಾನು ಹೇಗಾ ದರೂ ಮಾಡಿ ವ್ಯವಸ್ಥೆಮಾಡಿಕೊಳ್ಳಬಲ್ಲೆನು.'

'ಹದಿನಾರು ಹಸುಗಳಿವೆಯಲ್ಲವೆ? ಅವೆಲ್ಲವುಗಳನ್ನೂ ಜೋಪಾನ ಮಾಡುವದು ಸಾಮಾನ್ಯವಾದ ಮಾತಲ್ಲ. ಒಬ್ಬ ಹೆಂಗುಸಿನಿಂದ ಕೈಸಾಗದ ಮಾತೇ ಸರಿ.'

'ಅವುಗಳಲ್ಲಿ ಅರ್ಧದಷ್ಟು ಆಕಳುಗಳು ಒದಕೊಂಡಿವೆ. ಅವುಗಳನ್ನು ಮೇಯಲು ಅಡವಿಗೆ ಅಟ್ಟಿಬಿಟ್ಟರೆ ತೀರಿತು. ಉಳಿದವುಗಳನ್ನು ನೋಡಿ ಕೊಳ್ಳಲು ಅಷ್ಟು ಶ್ರಮದಾಯಕವಾಗಲಾರದು.'

'ಅದು ಹೋಗಲಿ ಬಿಡು. ನೀನು ಹೆಣ್ಣುಮಗಳು. ಇಡಿಯ ಮನೆಯಲ್ಲಿ ಒಬ್ಬಳೇ ಒಬ್ಬಳು. ನಿನಗೆ ಹೆದರಿಕೆ ಬರುವದಿಲ್ಲವೇ? ಮೇಲಾಗಿ ಸುತ್ತುಮುತ್ತೆಲ್ಲ ಈ ಜರ್ಮನ್ನರು ಬೇರೆ ಇದ್ದಾರೆ.'

'ಹೆದರಿಕೆ ಬರುವದಿಲ್ಲ. ಬೇರೆಯವರನ್ನೇ ನಾನು ಹೆದರಿಸಿಕೊಳ್ಳ ಬಲ್ಲೆ. ನಾನು ಅಷ್ಟು ಗಟ್ಟಿಗಳಿದ್ದೇನೆ; ತಾವು ಚಿಂತಿಸಬಾರದು.'

'ಆಯಿತು ಉಪಾಯವಿಲ್ಲ. ಗಂಡು ಎದೆಯವಳು!' ಎಂದು ಉದ್ಗಾರ ತೆಗೆದು ಕಮಾಂಡಂಟನು ಬಂದ ದಾರಿಯಿಂದ ತಿರುಗಿದನು.

ಹೀಗೆ ಆರು ತಿಂಗಳು ಕಳೆಯಿತು. ಕ್ರಿಸ್‌ಮಸ್ ದಿನದಿಂದ ಇಲ್ಲಿಯ ವರೆಗೆ ಓಸ್ಕಾರನ ಸುದ್ದಿಯು ಸುಳಿವೇ ಇವಳಿಗೆ ಹತ್ತಿರಲಿಲ್ಲ. ಅವನು ತನ್ನ ಬುದ್ಧಿವಂತಿಕೆಯಿಂದಲೂ, ಸದ್ಗುಣದಿಂದಲೂ ಗಳಿಸಿಕೊಂಡ ಸ್ವಾತಂತ್ರ್ಯವು ಇವಳ ಹೃದಯದಲ್ಲಿ ಒಂದು ತರದ ಉತ್ಸಾಹವನ್ನು ತುಂಬಿತ್ತು. ಆದರೂ ಏನೋ ಒಂದು ಕೊರತೆ ಮಾತ್ರ ತಲೆಹಾಕು ತಿತ್ತು. ಮುಳ್ಳಿನ ತಂತಿಯವರೆಗೂ ಬೇಕಾದ ಹಾಗೆ ತಿರುಗಾಡಲು ಓಸ್ಕಾರನಿಗೆ ಅಪ್ಪಣೆಯು ದೊರೆತಿತ್ತು; ಇಷ್ಟು ಸ್ವತಂತ್ರತೆ ಗಳಿಸಿಕೊಂಡ ಅವನು ಅವಳನ್ನು ನೋಡಲು ಬರಬಾರದೇಕೆ? ವರುಷಾರ್ಧವಾದರೂ ಅವನ ದರ್ಶನವಿಲ್ಲದ್ದರಿಂದ, ಅವಳು ಒಮ್ಮೊಮ್ಮೆ ಬಲು ನೊಂದುಕೊಳ್ಳು ತ್ತಿದ್ದಳು. ಆದರೆ ಒಂದು ವೇಳೆ ಅವನು ಬೆಟ್ಟಿಯಾದರೆ ಅಲ್ಲಿಂದ ಅವಳು ಮೋರೆ ತಪ್ಪಿಸಿಕೊಂಡು ಓಡಿಹೋದರೂ ಹೋಗಬಹುದೆಂಬ ಸಂಭವವೂ ಇದ್ದಿತು.

ಏನೇ ಆದರೂ, ಅವಳ ಕಣ್ಣೆದುರಿನಲ್ಲಿ ಅವನು ಪ್ರತ್ಯಕ್ಷವಾಗಿ ದ್ದಂತೆ ಅವಳಿಗೆ ಭಾಸವಾಗುತ್ತಿತ್ತು. ಅವಳು ಬೇಗನೆದ್ದು ದನದ ಕೊಟ್ಟಿ ಗೆಗೆ ಕೆಲಸವನ್ನು ಮಾಡಬೇಕೆಂದು ಹೋಗುವಳು. ಹೆಂಗಸರೇ ಮಾಡಲು ಅಯೋಗ್ಯವಾದ ಕೊಟ್ಟಿಗೆಯ ಹೋರೆಯನ್ನು ಅವಳು ಅಲ್ಲಿಗೆ ಮುಟ್ಟು ವದರೊಳಗಾಗಿ ಆದಾರೋ ಮಾಡಿಬಿಟ್ಟಿರುತ್ತಿದ್ದರು. ಯಾರು ಮಾಡು ತ್ತಿರಬಹುದು? ಮೋನಕಿಗಂತೂ ಹೊಳೆಯದೆ ಹೋಯಿತು. ಆದಾರು ತನ್ನ ಮೇಲೆ ಈ ಉಪಕಾರವನ್ನು ಮಾಡುತ್ತಿರುವವರು ಎಂದು ನಾನಾ ತರದ ಕಲ್ಪನೆಗಳನ್ನು ಕಟ್ಟುವತ್ತಿದಳು.

ಈ ತೆರದ ಕಾಣಿಸದ, ಕೇಳಿಸದ ಬಂದು ಶಕ್ತಿಯು ಅವಳಿಗೆ ಎಷ್ಟೋ ದಿನಗಳವರೆಗೆ ಸಹಾಯಮಾಡುತ್ತಿರುವದರಿಂದ ಅವಳ ಜೀವನದಲ್ಲಿ

ಕೆಲಮಟ್ಟಿಗೆ ಸುಖಸಮಾಧಾನಗಳು ನೆಲೆಸಲು ಕಾರಣವಾಗಿತ್ತು. ಹೀಗಿದ್ದರೂ ಅವಳ ಧೈರ್ಯವು ಕುಗ್ಗುವಂಥ ಒಂದು ಸಂದರ್ಭವುಂಟಾಯಿತು.

ಪೂರ್ವರಣಾಂಗಣದಲ್ಲಿ ಕಡುತರದ ಕಾಳಗವು ಆಗಲಿರುವದೆಂಬ ದಟ್ಟವಾರ್ತೆಯು ಬಂದಿತು. ಇಲ್ಲಿ ಕಾವಲುಗಾರರಾಗಿ ನಿಯಮಿಸಿದ ನುರಿತ ಜನರನ್ನೆಲ್ಲ ಯುದ್ಧಕ್ಕೆ ಕಳಿಸಲಾಗುವದು; ಅವರವರ ಬದಲು ತೀರ ಕೆಳತರಗತಿಯ ಕೆಲಸ ಮಾಡುತ್ತ ಬಂದವರನ್ನೆಲ್ಲ ಆ ಸ್ಥಳಗಳಲ್ಲಿ ನಿಯಮಿಸುವವರಿದ್ದಾರೆಂಬ ಸುದ್ದಿಯು ಕ್ಯಾಂಪಿನ ತುಂಬೆಲ್ಲ ವಾಯು ವೇಗದಿಂದ ಹಬ್ಬಿತು. ಹಾಗಾಗಲು ತಡವೇ ಆಗಲಿಲ್ಲ.

ಮೊದಲಿನ ಮೂರು ಕ್ಯಾಂಪುಗಳ ಮೇಲೆ ನಿಯಮಿಸಲ್ಪಟ್ಟ ಹೊಸ ಕಾವಲುಗಾರರ ಹೊಸ ಕ್ಯಾಪ್ಟನ್ನನು ಬಲು ಕೆಟ್ಟ ಸ್ವಭಾವದವನು. ಅವನು ನೀಚ ಮನುಷ್ಯನೆಂಬ ಕೀರ್ತಿಯನ್ನು ಎಂದೋ ಗಳಿಸಿಕೊಂಡು ಪ್ರಸಿದ್ಧನಾಗಿದ್ದನು. ಎಲ್ಲಿಯೋ ಒಂದು ಕಡೆ ಹಿಂದಕ್ಕೆ ಇವನು ಸಾರ್ವಜನಿಕ ಮನೆಯಲ್ಲಿ ಬಾಗಿಲಕಾಯುವವನಿದ್ದನೆಂದು ಅವನ ಕೈಕೆಳಗಿನ ಜನರೇ ಸುದ್ದಿಯನ್ನು ಬೀರಿದ್ದಾರೆ. ಯುದ್ಧ ಪ್ರಾರಂಭವಾಗದ ಮೊದಲು ಕೆಲವು ವರ್ಷಗಳ ಹಿಂದೆ ಒಬ್ಬ ಹೆಂಗಸಿನ ಮೇಲೆ ಕೈಮಾಡಿದ ಆರೋಪದಲ್ಲಿ ಅವನಿಗೆ ಶಿಕ್ಷೆಯೂ ಆಗಿತ್ತೆಂದು ಎಲ್ಲರಿಗೂ ಗೊತ್ತಿದ್ದ ಮಾತಾಗಿತ್ತು. ಅಪರಾಧಿಗಳ ಪಟ್ಟಿಯಲ್ಲಿ ಇವನ ಹೆಸರನ್ನು ಸರಕಾರದವರು ಎಂದೋ ಸೇರಿಸಿಬಿಟ್ಟಿದ್ದರು. ಅಂಥವನೆ ಈಗ ಕ್ಯಾಪ್ಟನ್ನನು. ಅವಗುಣ ಬಿಟ್ಟು ಶಿವಗುಣಿಯಾಗಿರಬಹುದೆಂದು ಈ ಸ್ಥಳವು ದೊರೆತಿದ್ದರೂ ದೊರೆತಿರಬಹುದು.

ಈ ನೀಚನ ಕಣ್ಣೊಳಗೆ ತಾನು ಒತ್ತಾಹತ್ತಿರುವೆನೆಂಬ ತಿಳುವಳಿಕೆ ಮೋನಳಿಗೆ ಎಚ್ಚರಿಕೆಯನ್ನು ಕೊಡಲಾರಂಭಿಸಿತು. ಅವನ ಕಾಕದೃಷ್ಟಿಯು ಇವಳ ಮೇಲೆ ಬೀಳಲು ತಡೆಹಿಡಿಯಲಿಲ್ಲ. ಕೆಲಸವಿಲ್ಲದೆಯೂ ಅವಳನ್ನು ಹಿಂಬಾಲಿಸಿ ಅಸಂಬದ್ಧ ಪ್ರಶ್ನೆಗಳನ್ನು ಕೇಳತೊಡಗಿದನು. ಅವಳ ಕಿವಿಯ ಮೇಲೆ ಬೀಳಲೆಂದೇ ಅವಳ ವಿಷಯವಾಗಿ ಆಡಬಾರದ ಮಾತುಗಳನ್ನು ಬೊಗುಳಲಾರಂಭಿಸಿದನು. 'ಒಳ್ಳೇ ಮೋಹಕ ರೂಪು!

ಇಂಥ ರೂಪಕ್ಕೆ ಮೆಚ್ಚದವರಾರು! ಮೋಹಿನಿಯಾಗಿದ್ದಾಳೆ! ಹೆಂಡತಿ ಯಾಗಲಂತೂ ಬಲು ತಕ್ಕ ಹೆಣ್ಣು!' ಎಂದು ಬಹಿರಂಗವಾಗಿ ಉದ್ಗಾರ ತೆಗೆಯಲಾರಂಭಿಸಿದನು.

ಇಲ್ಲದ್ದೊಂದು ನೆವವನ್ನು ಮುಂದೆ ಮಾಡಿಕೊಂಡು ಹೊತ್ತಿಲ್ಲದ ಹೊತ್ತಿನಲ್ಲೂ ಬಂದು ಅವಳೊಡನೆ ಮಾತುಕತೆಯಾಡುವನು. ಇರುಳಿ ನಲ್ಲಿಯೂ ಸಹ ಬಂದು ಮನೆಯ ಬಾಗಿಲನ್ನು ತಟ್ಟುವವರೆಗೆ ತನ್ನ ಬಲೆಯನ್ನು ಬೀಸಿದನು. ಎಲ್ಲೆಲ್ಲಿಯೂ ಶಾಂತತೆಯು ತುಂಬಿದೆ. ರಾತ್ರಿಯೂ ಹೆಚ್ಚಾಗಿದೆ. ಯಾರ ಸುಳಿವೂ ಇಲ್ಲ. ಇಂಥ ಹೊತ್ತಿನಲ್ಲಿ ಮೋನಳ ಮನೆಯ ಬಾಗಿಲ ತಟ್ಟಿದ ಸದ್ದಾಯಿತು. ತಟ್ಟಿದವರಾರು ಎಂಬುದನ್ನು ವಿಚಾರಿಸದೆ ಮೋನಳು ಬಾಗಿಲನ್ನು ತೆರೆದಳು. ಆ ಮಾನು ಷ್ಯನು ಒಳಬರಲು ಅವಳ ಮೈಮೇಲೆಯೇ ಬಂದನು; ಅವನನ್ನು ಒಳಬರ ದಂತೆ ತಡೆಗಟ್ಟಿದಳು. ದೈನ್ಯಾಸಬಟ್ಟು ಬೇಡಿಕೊಂಡನು. ಆಸೆಯನ್ನು ಹಚ್ಚಿದನು. ಬೆದರಿಕೆ ಹಾಕಿದನು. ಎಲ್ಲವೂ ವಿಫಲವಾದುದರಿಂದ ಕಡೆಗೆ ಅವನು ಮೈಕಸುವಿನಿಂದ ಮನೆಯೊಳಗೆ ನುಗ್ಗಲು ಯತ್ನಿಸಿದನು. 'ತರು ಣಿಯೇ, ಮೂರ್ಖಳಾಗಬೇಡ. ನನ್ನನ್ನು ಬರಮಾಡಿಕೊಳ್ಳು; ಅದರಲ್ಲಿ ನಿನ್ನ ಹಿತವಿದೆ' ಎಂದು ಮುಗುಳುನಗೆಯಿಂದ ಮಾತನಾಡಿಸಿದನು.

ಈ ಮಾತು ಕೇಳಿದೊಡನೆಯಂತೂ ಅವಳ ಮೈಯು ನಡುಗ ಹತ್ತಿತು. ಬೆದರಿ ಬಾಗಿಲನ್ನು ಇಕ್ಕಬೇಕೆಂದು ಹವಣಿಸಿದಳು. ಸದೃಢ ಕಾಯದ ಹೆಂಗಸಾದರೂ ಅವನ ಶಕ್ತಿಗೆ ಈಡಾಗಲಿಲ್ಲ. ಎಷ್ಟೆಂದರೂ ಅಬಲೆ. ಅವನು ಗಂಡಸು. ಕೇಳುವನೇ? ಅವಳನ್ನು ಗಟ್ಟಿಯಾಗಿ ಹಿಡಿದು ಕೊಳ್ಳಬೇಕೆಂಬ ಎತ್ತುಗಡೆಯಲ್ಲಿದ್ದಾಗ ಹಿಂದುಗಡೆಯಿಂದ ಅದಾರೋ ಬಂದು ಕ್ಯಾಪ್ಟನ್ನನನ್ನು ಹಿಡಿದೆಳೆದರು. ಓಸ್ಕಾರನ ಹೊರತು ಬೇರಿನ್ನಾರೂ ಇರಲಾರರೆಂದು ಅವಳು ಕೂಡಲೆ ಕಲ್ಪಿಸಿದಳು. ಓಸ್ಕಾರನು ತನ್ನ ಎರಡೂ ಕೈಗಳಿಂದ ಆ ದುರುಳನ ಕುತ್ತಿಗೆಯನ್ನು ಹಿಡಿದು, ದರದರ ನೆಳೆದು ಹೊರಬಾಗಿಲದ ಆಚೆಗೆ ನೂಕಿದನು. ದೊಪ್ಪನೆ ಅವನು ನೆಲ ಕ್ಕುರುಳಿದನು. ಅವನು ಒಂದೆರಡು ನಿಮಿಷಗಳ ಮೇಲೆ ಸಾವರಿಸಿ

ಕೊಂಡೆದ್ದು, ಗಪ್ಪುಚಿಪ್ಪಾಗಿ, ಅಲ್ಲಿಂದ ಬಿರಬಿರನೆ ಹೊರಟುಹೋದನು. ಇತ್ತ ಓಸ್ಕಾರನೂ ಸಹ ಮೋಸಳೊಡನೆ ಒಂದು ಮಾತನ್ನೂ ಕೂಡ ಆಡದೆ ಹೊರಟುಬಿಟ್ಟನು.

ನಡು ಬೇಸಿಗೆಯ ಕಾಲ. ನಡುಗಡ್ಡೆಯಲ್ಲಿಯ ಕುದುರೆಯ ಜೂಜಾಟವು ಪ್ರಾರಂಭವಾಯಿತು. ಜೂಜಾಟವೆಂದರೆ ಕೈದಿಗಳಿಗೂ ಬಲು ಹಿಗ್ಗು. ಆದರೆ ಅವರೆಲ್ಲರಿಗೆ ಆಟದ ಜ್ಞಾನವಿಲ್ಲ. ಕಣ್ಣಿಂದ ನೋಡಿ ಸಂತೋಷಪಡುವವರು. ಕಾವಲುಗಾರರ ಹಾಗೂ ಅಧಿಕಾರಸ್ಥರ ಬದಲಾವಣೆಯಾದಂದಿನಿಂದ ಕ್ಯಾಂಪಿನೊಳಗಿನ ರೀತಿಭಾತಿಗಳು ವಿಪರೀತವಾಗಿ ಕೆಟ್ಟುಹೋಗಿವೆ. ಕುಡುಕರ ಸಂಖ್ಯೆಯು ಅಳತೆಗೆಟ್ಟು ಬೆಳೆದಿದೆ. ಅಂತೂ ಶ್ರೀಮಂತ ಜನರ ಭಾಗವಾದ ಮೊದಲನೆಯ ಕಂಪೌಂಡಿನಲ್ಲಿ ಮದಿರಾ ಪ್ರವೇಶವು ಮೊದಲಿಗೆ ಕಾಲಿಟ್ಟಿತೆಂಬುದರಲ್ಲ ಯಾವ ಸಂಶಯವೂ ಇಲ್ಲ.

ಮದಿರೆಯ ಸಂಶೋಧನಕ್ಕಾರಂಭವಾಯಿತು. ದೊಡ್ಡ ಜಹಗೀರು ದಾರ ಜರ್ಮನ್ನನೊಬ್ಬನ ಕುಟೀರವನ್ನು ಸಂಶಯಪಟ್ಟು ಶೋಧಿಸಲು ಅಧಿಕಾರಿಗಳು ಪ್ರವೇಶಿಸಿದರು. ರಾತ್ರಿ ವಿಹಾರದ ಕೂಟಗಳಲ್ಲಿಯಂತೆ ಒಂದು ಮೇಜಿನ ಸುತ್ತಲೂ ಹನ್ನೆರಡು ಜನರ ಗುಂಪೊಂದು ಕುಳಿತು ಕೊಂಡು ಬ್ರ್ಯಾಂಡಿ, ವಿಸ್ಕಿ, ಸಿಗಾರ್ ಮೊದಲಾದ ಮಾದಕ ದ್ರವ್ಯಗಳನ್ನು ಸೇವಿಸುವ ದೃಶ್ಯವು ಅಧಿಕಾರಸ್ಥರ ಕಣ್ಣಿಗೆ ಬಿದ್ದಿತು. ಕಮಾಂಡಂಟನು ಅದರ ತಳಬುಡವನ್ನು ಹೊರಗೆಳೆಯಲು ಮಾಡಿದ ಪ್ರಯತ್ನವು ವ್ಯರ್ಥ ವಾಯಿತು. ಕಾವಲುಗಾರರ ಕ್ಯಾಪ್ಟನ್ನನು ಸಂಶೋಧನೆಯಲ್ಲಿ ಭಾಗ ವಹಿಸಲು ಉತ್ಸಾಹವನ್ನು ತೋರಿಸದೆ, ಜವಾಬನ್ನು ಕೂಡ ಕೊಡಲು ಹಿಂದೆಮುಂದೆ ನೋಡಿದನು. ಯಾಕೆಂದರೆ ಅದೆಲ್ಲಿ ತನ್ನ ತಲೆಗೆ ಬಡಿಯುವ ದೆಂದು ಅವನು ಹೆದರಿ ಹೋಗಿದ್ದನು.

ಬರಬರುತ್ತ ಎರಡನೆಯ ಕಂಪೌಂಡಿನಲ್ಲಿ ಇದಕ್ಕೂ ಹೇಯವಾದ ಅನಾಹುತಗಳು ತಲೆದೋರಿದವು. ನಾವಿಕರು ಕುಡಿದು ದುಂದಾಗಿ ತಮ್ಮ ತಮ್ಮೊಳಗೆ ಹೊಡೆದಾಟವನ್ನೆಬ್ಬಿಸಿದರು. ಸೆರೆಯನ್ನು ಕೊಂಡುಕೊಳ್ಳಲು ಹಣವೆಲ್ಲಿಂದ ಬಂತು? ಸೆರೆಯು ಕ್ಯಾಂಪಿನೊಳಗೆ ಹೇಗೆ ಕಾಲಿಟ್ಟಿತು?

ಎಂಬ ಪ್ರಶ್ನೆಗಳಿಗೆ ಉತ್ತರ ದೊರೆಯುವದೆ ಕಠಿಣವಾಯಿತು. ಕಾರಖಾನೆ, ಹೊಲಗಳಲ್ಲಿ ದುಡಿಯುವವರಿಗೆ ಮಾತ್ರ ತೀರ ಕಡಿಮೆ ಸಂಬಳವು ದೊರೆಯುತ್ತಿತ್ತು. ಅದರಲ್ಲಿಯೇ ಕೆಲವೊಂದು ಭಾಗವು ಕ್ಯಾಂಪಿನೊಳಗಿನ ಬ್ಯಾಂಕಿಗೆ ಅವರವರ ಹೆಸರಿನಿಂದ ಜಮೆಯಾಗುವದು. ಯುದ್ಧವು ಮುಗಿದ ಮೇಲೆ ಅವರವರಿಗೆ ಕೊಟ್ಟು ಕಳಿಸಬೇಕೆಂದೆ ಸರಕಾರದವರು ಹಾಗೆ ಮುರಿದುಕೊಳ್ಳುತ್ತಿದ್ದರು. ಶೋಧನೆಯ ಕಾರ್ಯವು ಮತ್ತೊಮ್ಮೆ ಕೂಲಂಕಷವಾಗಿ ಸಾಗಿದರೂ ಯಶಸ್ಸು ದೊರೆಯಲಿಲ್ಲ. ಅಲ್ಲಿಯ ಕೈದಿಗಳೆಲ್ಲರು ಏನನ್ನೂ ಹೇಳದಾದರು; ಕ್ಯಾಪ್ಟನ್ನನಿಗೆ ಇದಾವುದರ ಗುಟ್ಟು ರಟ್ಟಾಗದಿರಲಿಕ್ಕೆ ಕಾರಣಗಳೇ ಸಿಕ್ಕದಂತಾಯಿತು.

ಒಂದು ದಿನ ಬೆಳಿಗ್ಗೆ, ಎರಡನೆಯ ಕಂಪೌಂಡಿನೊಳಗಿನ ಕೆಲವು ನಾವಿಕ ಕೈದಿಗಳೊಡನೆ ಓಸ್ಕಾರನು ಮಾತನಾಡುತ್ತ ನಿಂತಿರುವದು ಮೋನಳ ಕಣ್ಣಿಗೆ ದೂರಿನಿಂದಲೆ ಬಿದ್ದಿತು. ಸಿಟ್ಟಿಗೆದ್ದ ಕಾಡುಮೃಗಗಳಂತೆ, ಹಲ್ಲನ್ನು ಮಸೆಯುತ್ತ, ಮುಂಗೈಗಳನ್ನು ತಿಕ್ಕುತ್ತ ಸೇಡು ತೀರಿಸಿಕೊಳ್ಳುವ ಪ್ರತಿಜ್ಞೆಯನ್ನು ಈಡೇರಿಸಿಕೊಳ್ಳುವವರಂತೆ ಆ ಕೈದಿಗಳೆಲ್ಲರೂ ವರ್ತಿಸುತ್ತಿದ್ದರು. ತುಸು ಹೊತ್ತಿನ ಮೇಲೆ ಮೊದಲನೆಯ ಕಂಪೌಂಡಿನಿಂದ ಅವಸರವಸರದಿಂದ ಕ್ಯಾಪ್ಟನ್ನನು ಆ ಸ್ಥಳಕ್ಕೆ ಬಂದು, ಕ್ರೂರವಾದ ಆಜ್ಞೆಯಿಂದ ಅವರೆಲ್ಲರನ್ನು ಅಲ್ಲಿಂದ ಚದುರಿಸಿ, ಕೆಂಡವನ್ನು ಕಾರುವ ನೋಟದಿಂದ ಓಸ್ಕಾರನನ್ನು ದುರುಗುಟ್ಟಿ ನೋಡಿದನು. ಓಸ್ಕಾರನು ಮಾತ್ರ ಒಟ್ಟೊಂದು ಮಾತನಾಡಲಿಲ್ಲ. ಕ್ಯಾಪ್ಟನ್ನನು ಅಲ್ಲಿಂದ ಮುಂದೆ ಸುಮ್ಮನೆ ತನ್ನ ಸ್ಥಳದ ಕಡೆಗೆ ಸಾಗಿದನು.

ಮುಂದೆ ಒಂದು ತಾಸಿನ ಮೇಲೆ, ದನದ ಕೊಟ್ಟಿಗೆಯಲ್ಲಿ ಮೋನಳು ಏನೋ ಕೆಲಸಮಾಡುತ್ತಿರುವಾಗ, ಎರಡನೆಯ ಕಂಪೌಂಡಿನೊಳಗಿಂದ ಕರ್ಣಕಟುವಾದ ಚೀತ್ಕಾರವೊಂದು ಅವಳಿಗೆ ಕೇಳಬಂದಿತು. ಬಾಗಿಲದ ಹೊರಬಂದು ನೋಡಿದಳು. ಅಲ್ಲಿಯ ಹೃದಯದ್ರಾವಕವಾದ ದೃಶ್ಯವೊಂದು ಸ್ಪಷ್ಟವಾಗಿ ಕಂಡಿತು. ಆ ಮೊದಲು ಓಸ್ಕಾರನೊಡನೆ ರೊಚ್ಚಿನಿಂದ ಮಾತಾಡುವವರಲ್ಲದೆ ಇನ್ನೂ ನೂರಾರು ಕೈದಿಗಳು ಸೇರಿ

ಕೊಂಡು ಒಬ್ಬ ಮನುಷ್ಯನನ್ನು ಹಂದಿಯ ಬೇಟೆಯನ್ನಾಡುವಂತೆ ಮನ ಬಲ್ಲಂತೆ ಸದೆಗುತ್ತಿದ್ದರು. ಕೇಕೆ ಹಾಕುತ್ತಿದ್ದರು. ಆನಂದದಿಂದ ಚಪ್ಪಾಳೆ ತಟ್ಟುತ್ತಿದ್ದರು; ಬಿದ್ದುಬಿದ್ದು ನಗುತ್ತಲಿದ್ದರು. ಅವರ ಒದಿತವನ್ನು ತಾಳ ಲಾರದೆ ಆ ಮನುಷ್ಯನು ಗೋಳಾಡುತ್ತಿದ್ದನು. ಅವನ ಕೋಟು, ಶರ್ಟು, ಚಣ್ಣಗಳೆಲ್ಲವೂ ಹರಿದು ಚಿಂದಿಚಿಂದಿಯಾಗಿವೆ. ಮೈತುಂಬೆಲ್ಲ ಬಾಸಾಳ ಮೂಡಿವೆ. ತನ್ನನ್ನು ಹರಿದು ತಿನ್ನುವವರಿಂದ ಪಾರಾಗಲು ಅವನು ಅತ್ತಿತ್ತ ಮಿತಿಮೀರಿ ಹವಣಿಸುತ್ತಿದ್ದನು. ಅವನು ಓಡುತ್ತಿರುವಂತೆ ಅಡ್ಡ ಗಾಲು ಒಡೆದು ಕೆಡವುತ್ತಿದ್ದರು; ಅವನು ಬಿದ್ದನೆಂದರೆ ಒದೆಯುತ್ತಿದ್ದರು. ಈ ಹಾಹಾಕಾರವನ್ನು ಕೇಳಿ ಸುತ್ತಲಿನ ಸೈನಿಕರೆಲ್ಲರು ಧಾವಿಸುತ್ತ ಆ ಸ್ಥಳಕ್ಕೆ ಬಂದರು. ದಂಗೆಗಾರರಿಗೆ ಬಂದೂಕುಗಳ ಬೆದರು ತೋರಿಸಿದರು. ಆದರೆ ಅವರ ಕೈಯೊಳಗಿನ ಬಂದೂಕುಗಳನ್ನೆ ಕೈದಿಗಳು ಕಿತ್ತುಕೊಂಡು ಹೊಳ್ಳುಪ್ಪು ಹೂಡಿದರು. ಗದ್ದಲವು ಭೀಕರವಾಯಿತು. ಕಂಪೌಂಡಿನ ತುಂಬೆಲ್ಲ ಗೊಂದಲವೇ ಗೊಂದಲವು.

ಓಸ್ಕಾರನೆ ಈ ಸಂಕಟಕ್ಕೀಡಾಗಿರಬೇಕೆಂಬ ಕಲ್ಪನೆಯಿಂದ ಮೋನಳು ವಿಚಾರದಲ್ಲಿ ಹೊತ್ತುಗಳೆಯದೆ ಆ ಸ್ಥಳಕ್ಕೆ ಓಡುತ್ತ ಬಂದಳು. ಬಾಗಿಲುಗಳಲ್ಲಿ ಅವಳನ್ನು ತಡೆಯಲು ಯಾವ ಕಾವಲುಗಾರರೂ ಇರ ಲಿಲ್ಲ. ಕುಡಿದು, ದುಂದಾಗಿ ಮತ್ತರಾದ ಕೈದಿಗಳ ಸಂದಣಿಯೊಳಗಿಂದ ಅವಳು ತನ್ನ ಶಕ್ತಿಮೀರಿ ಗುದ್ದಾಡಿ ಆ ಮನುಷ್ಯನ ಹತ್ತಿರ ಧಾವಿಸಿದಳು.

'ತಡೆಯಿರಿ, ಜೋಕೆ, ಪಶುಗಳೇ, ತೊಲಗಿರತ್ತ' ಎಂದು ಮೊದಲು ಅವಳು ಗುಡುಗುಹಾಕಿದಳು. ಅವಳ ಮೈಬಲಕ್ಕಿಂತಲೂ, ಧ್ವನಿಯ ಬೆದರಿಕೆಗೆ ಕೈದಿಗಳೆಲ್ಲರೂ ದಾರಿಸಿಕ್ಕತ್ತ ಕಾಲಿಗೆ ಬುದ್ಧಿಕೊಟ್ಟರು. ಅಲ್ಲಿ ಬೊಕ್ಕಬೋರಲಾಗಿ ಬಿದ್ದ ಮನುಷ್ಯನ ಹತ್ತಿರ ಬಂದು ನಿಂತಳು. ಪಾಪ! ತಲೆಯಿಂಧಲೂ, ಬಾಯಿಯಿಂದಲೂ ರಕ್ತವು ಒಂದೇಸವನೆ ಸುರಿಯು ತ್ತಿತ್ತು. ಇವಳು ಕಣ್ಣಿಗೆ ಬಿದ್ದೊಡನೆ ತನ್ನ ಕಾಲಿಗೆ ಬಿದ್ದು ಮೊರೆ ಯಿಡುವ ಮನುಷ್ಯನಾರಿರಬಹುದೆಂದು ವಿಚಾರಮಾಡುತ್ತ ಅವನನ್ನು ಎಬ್ಬಿಸಿ ಕುಳ್ಳಿರಿಸಿ ಉಪಚಾರಮಾಡತೊಡಗಿದಳು.

ಕಾನಲುಗಾರರ ನೀಚ ಕ್ಯಾಪ್ಟನ್ನ ! ತನ್ನ ಮೇಲೆಯೂ ಕೈಮಾಡಿದ ದುರುಳನೆಂದು ಅವಳು ಉಪಚರಿಸುವದರಲ್ಲಿ ಹಿಂದೆಮುಂದೆ ನೋಡಲಿಲ್ಲ ಆಪತ್ತಿನಲ್ಲಿದ್ದವರಿಗೆ ನೆರವಾಗುವದು ತಪ್ಪಲ್ಲೆಂದು ತಿಳಿದು.

ನರಳುತ್ತಿರುವ ಆ ಮನುಷ್ಯನು ತನ್ನ ಜೀವವನ್ನುಳಿಸಿದ ಅವಳನ್ನು ನೋಡಿ, ಇನ್ನಿಷ್ಟು ಕನಿಕರದಿಂದ ಅವಳಿಗೆ ಬೇಡಿಕೊಂಡನು. ಉಪಕಾರವಾಯಿತೆಂದನು. ಇಷ್ಟರಲ್ಲಿ ಎರಡನೆಯ ಕಂಪೌಂಡಿನೊಳಗಿನ ಸೈನಿಕರ ಗುಂಪೊಂದು ಬಂದು, ಕ್ಯಾಪ್ಟನನ್ನು ಸುರಕ್ಷಿತವಾಗಿ ಬೇರೆ ಸ್ಥಳಕ್ಕೆ ಹೊತ್ತುಕೊಂಡು ಒಯ್ಯಿತು. ಸಿಟ್ಟಿಗೆದ್ದ ಆ ಜನಜಂಗುಳಿಯು ತಮ್ಮ ತಮ್ಮ ಗುಡಿಸಲುಗಳಿಗೆ ಓಡತೊಡಗಿತು; ದಂಗೆಯು ಶಾಂತವಾಯಿತು. ಕ್ಯಾಪ್ಟನ್ನನಿಗೆ ಕೈತೋರಿಸಬೇಕೆಂದು ದಾರಿಕಾಯುತ್ತಿದ್ದರು. ಸಮಯ ಸಂಭವಿಸಿತು. ಚನ್ನಾಗಿಯೇ ಬುದ್ಧಿಗಲಿಸಿಬಿಟ್ಟರು.

ಮುಂದೆ ತುಸುಹೊತ್ತಿನ ಮೇಲೆ ಆ ಕಂಪೌಂಡಿನ ಕೈದಿಗಳಲ್ಲಿ ಆರು ಜನರನ್ನು ಬಂಧಿಸಿ, ಪೀಲ್‌ಪಟ್ಟಣದಲ್ಲಿರುವ ತುರಂಗಕ್ಕೆ ಸಾಗಿಸಿದರೆಂಬ ಸುದ್ದಿಯು ಹರಡಿತು. ಆ ಆರು ಜನರಲ್ಲಿ ಓಸ್ಕಾರನೂ ಒಬ್ಬನಾಗಿದ್ದನು. ಮರುದಿನ ಮುಂಜಾವಿನಲ್ಲಿಯೇ ಅವರ ವಿಚಾರಣೆಯೂ ಜರುಗತಕ್ಕದ್ದೆಂದು ಸರಕಾರದವರು ಗೊತ್ತುಮಾಡಿದ್ದರು.

ಓಸ್ಕಾರನು ಮಾಡಿರುವಂಥ ಅಪರಾಧವಾದರೂ ಏನು ? ಅವನನ್ನೇಕೆ ಬಂಧಿಸಿದರು ? ಮೋನಳನ್ನೇಕೆ ಸರಕಾರದವರು ಕರೆಯಿಸಲಿಲ್ಲವೆಂಬುದು ತಿಳಿಯುವ ಮಾತು. ಆದರೂ ಅವಳು ನ್ಯಾಯಾಸ್ಥಾನಕ್ಕೆ ಹೋಗಿಯೇ ತೀರಬೇಕೆಂದು ನಿಶ್ಚಯಿಸಿದಳು. ಅಲ್ಲಿ ತಾನು ಹೋಗುವದರಿಂದ ಯಾವುದಾದರೊಂದು ವಿಪತ್ತು ತನಗೆ ಒದಗಬಹುದೆಂಬ ಸಂಭವವಿದ್ದರೂ ಅವಳು ನಿಶ್ಚಯವನ್ನು ಬದಲಾಯಿಸಲಿಲ್ಲ. ವಿಪತ್ತು ಬಂದರೂ ಅಷ್ಟೆ, ಬರದಿದ್ದರೂ ಅಷ್ಟೆ ಎಂಬ ಸಮಾಧಾನದಿಂದ ಅವಳು ಧೈರ್ಯವನ್ನು ತಳೆದಿದ್ದಳು. ಬೇಗನೆ ಏಳಬೇಕಾದ್ದರಿಂದ ರಾತ್ರಿಯ ಕೆಲಸಗಳನ್ನು ತೀರಿಸಿ ದಿನದಗಿಂತಲೂ ಬೇಗನೆ ಮಲಗಿಕೊಂಡಳು.

---

# ಸಾಕ್ಷಿ

ಮರುದಿನ ಮುಂಜಾನೆ ಹಸುಗಳು ಒದರುವ ಮೊದಲೆ, ಮೋಸಳು ಎದ್ದಳು. ಕೊಟ್ಟಿಗೆಯಲ್ಲಿಯ ಕೆಲಸವನ್ನು ಲಗುಬಗೆಯಿಂದ ತೀರಿಸಿದವಳೆ ಪೀಲಾಪಟ್ಟಣದ ದಾರಿಯನ್ನೆ ಹಿಡಿದಳು. ಕೋರ್ಟು ಪಟ್ಟಣಿಗರಿಂದಲೂ, ಕಾವಲುಗಾರರಿಂದಲೂ ಕಿಕ್ಕಿರಿದು ಹಿಂದಿನಂತೆ ತುಂಬಿತ್ತು. ಅವಳು ಬಹು ಪ್ರಯಾಸಪಟ್ಟು ಒಳಗೆ ಸ್ಥಳವನ್ನು ದೊರಕಿಸಿದಳು.

ವಿಚಾರಣೆ ಆರಂಭವಾಗಿತ್ತು. ಬಂಧಿತರಾದ ಕೈದಿಗಳು ಗೊತ್ತು ಮಾಡಿದ ಸ್ಥಳದಲ್ಲಿ ನಿಂತಿದ್ದಾರೆ. ತಲೆ ಬಾಚಿಕೊಳ್ಳದ, ಹರಹರಕು ಅಂಗಿಯನ್ನು ತೊಟ್ಟುಕೊಂಡ ಐವರು ನಾವಿಕರು; ಓಸ್ಕಾರನೊಬ್ಬನು. ಉಂಗುರುಗೂದಲು, ಮಾಟಾದ ನಿಲುವು. ಕಳೆಯುಳ್ಳ ಮುಖ. ಸೆಟೆದು ನಿಂತಿದ್ದಾನೆ. ನಡುವೆ ಗವ್ಹರ್ನರನು. ಒಂದು ಬದಿಗೆ ಕಮಾಂಡಂಟನು. ಇನ್ನೊಂದು ಬದಿಗೆ ಬೇಲೀಫನು. ಕಾವಲುಗಾರರ ಕ್ಯಾಪ್ಟನ್ನನು ತಲೆಪಟ್ಟಿಯನ್ನು ಕಟ್ಟಿಕೊಂಡು ಸಾಕ್ಷಿಯ ಪೆಟ್ಟಿಗೆಯಲ್ಲಿದ್ದಾನೆ.

'ಕ್ಯಾಪ್ಟನ್ನರೇ, ಏನೇನಾಯಿತೆಂಬುದನ್ನು ಒಂದೂ ಬಿಡದಂತೆ ಹೇಳಿರಿ' ಎಂದು ವಕೀಲನು ವಿಚಾರಿಸಿದನು.

ಅತ್ಯಂತ ವಿನಯದಿಂದ ಕೋರ್ಟಿಗೆ ನಮಸ್ಕರಿಸಿ, 'ರಾಯರೇ, ಪೂಜ್ಯರೆ, ಮಹಾನುಭಾವರೆ' ಎಂದು ಮುಂತಾಗಿ ಅನೇಕ ಸಂಬೋಧನೆಗಳಿಂದ ಕ್ಯಾಪ್ಟನ್ನನು ಹೇಳತೊಡಗಿದನು :

'ನಿನ್ನೆ—ಇದೇ ಹೊತ್ತಾಗಿರಬಹುದು. ಏನೋ ಒಂದು ಸಾಧಾರಣ ಕೆಲಸದ ನಿಮಿತ್ತವಾಗಿ ನಾನು ಎರಡನೆಯ ಕಂಪೌಂಡಿನೊಳಗೆ ಕಾಲಿಡುವಷ್ಟರಲ್ಲಿ, ಒಮ್ಮೆಲೆ ಪೂರ್ವಸಂಕೇತವಿದ್ದಂತೆ ಕೈದಿಗಳು ನನ್ನನ್ನು ಮುತ್ತಿಯೇ ಬಿಟ್ಟರು. ಎರಡುನೂರು ಕೈದಿಗಳ ಗುಂಪಿರಬಹುದು. ಅವರಲ್ಲಿಯೇ ಈ ಆರು ಜನರು ಅವರ ಮುಖಂಡರೂ, ಸೂತ್ರಚಾಲಕರೂ ಆಗಿದ್ದರು. ಐವರು ಎರಡನೆಯ ಕಂಪೌಂಡಿನವರು; ಆರನೆಯವನು ಮಾತ್ರ ಮೂರನೆಯ ಕಂಪೌಂಡಿಗೆ ಸಂಬಂಧಪಟ್ಟವನು.

ಇವನಂಥ ದುಷ್ಟನಂತೂ ಇಡಿಯ ಕ್ಯಾಂಪಿನಲ್ಲಿಯೇ ಯಾರೂ ಇಲ್ಲ. ಉಳಿದವರು ಗುಡಿ ಕಟ್ಟಿದರೆ ಇವನು ಕಳಸವಿಡತಕ್ಕವನು. ಇವನು ಕ್ಯಾಂಪಿನ ಕ್ಯಾಪ್ಟನ್ನನಿರುವದರಿಂದ ಬೇಕಾದಲ್ಲಿಗೆ ಹೋಗಿಬರಲು ಅಪ್ಪಣೆ ದೊರೆತಿದೆ. ಆದರಿಂದಂತೂ ಇವನು ಯಾವಾಗಲೂ ತನ್ನ ಈ ಸ್ವತಂತ್ರತೆಯನ್ನು ಹೀಗೆ ಉಪಯೋಗಿಸಿಕೊಳ್ಳುತ್ತಿದ್ದಾನೆ.'

'ಅದು ನಿನಗೆ ಹೀಗೆ ತಿಳಿದುಬಂದಿತು?'

'ನನ್ನ ಕೈಕೆಳಗಿನವರ ಬಾಯಿಯಿಂದ ಕೇಳುತ್ತಲೇ ಇದ್ದೆ. ನ್ಯಾಯಾಧೀಶರೆ, ಈ ದೊಂಬೆಯನ್ನಂತೂ ನಾನೇ ನನ್ನ ಸ್ವಂತ ಕಿವಿಗಳಿಂದ ಕೇಳಿದ್ದೇನೆ. ಕಣ್ಣಾರೆ ಕಂಡಿದ್ದೇನೆ.'

'ನಿನಗೆ ಕೇಳಿಸಿದ್ದಾದರೂ ಏನು?'

'ನಾನು ಮೊದಲನೆಯ ಕಂಪೌಂಡಿನಲ್ಲಿಯ ಒಂದು ಕುಟೀರದ ಹಿಂಬದಿಯಲ್ಲಿದ್ದಾಗ, ಇವನು ಎರಡನೆಯ ಕಂಪೌಂಡಿನ ಜನರಿಗೆ ನನ್ನನ್ನು ಕೊಲೆಮಾಡಬೇಕೆಂದು ಉಪದೇಶಿಸಿ ಹುರಿದುಂಬಿಸುತ್ತಿದ್ದ ಮಾತುಗಳು ನನ್ನ ಕಿವಿಗೆ ಬಿದ್ದವು.'

'ಈ ಆರನೆಯವನಿಗೆ ನಿನ್ನಲ್ಲಿ ದ್ವೇಷಬುದ್ಧಿಯಿರುವದೇ ಹೇಗೆ?' ಎಂದು ಗವ್ಹರ್ನರನು ತುಸು ಮುಂದೆ ಬಾಗಿ, ಕನ್ನಡಕವನ್ನು ಸರಿಪಡಿಸಿಕೊಳ್ಳುತ್ತ ವಿಚಾರಿಸಿದನು.

'ನನ್ನ ಬಗ್ಗೆ ಅವನು ಯಾವಾಗಲೂ ಹಲ್ಲುಮಸೆಯುತ್ತಿರುತ್ತಾನೆ.'

'ನೀನು ಅವನಿಗೇನಾದರೂ ತೊಂದರೆಗೊಂದರೆ ಕೊಟ್ಟಿರುವಿಯಾ?'

'ಯಾವ ತರಹದ ತೊಂದರೆಯನ್ನೂ ನಾನು ಕೊಟ್ಟಿರುವದಿಲ್ಲ.'

'೬ನೇ ನಂಬರ'—ಎಂದು ಗವ್ಹರ್ನರನು ಬೇಲೀಫನ ಕಡೆಗೆ ತಿರುಗಿದನು. ಬೇಲೀಫನು ಅವನ ಹೆಸರಿನಿಂದ ಕೂಗಿದನು.

ಒಸ್ಕಾರನು ಮುಂದೆ ಹೋಗುತ್ತಿರುವವನನ್ನು ಕಂಡು ಮೋನಳು ತಪ್ಪುಳಾದಳು. ಅವನು ಕೈದಿಯೇ ಇದ್ದುದರಿಂದ ಸತ್ಯವನ್ನು ಹೇಳುತ್ತೇನೆಂಬ ಸುಳ್ಳು ಆಣೆಯನ್ನು ಮಾಡಿಸಿಕೊಳ್ಳಲಿಲ್ಲ.

ಸಾಕ್ಷಿಯ ಪೆಟ್ಟಿಗೆಯಲ್ಲಿ ನಿಲ್ಲಲು ಅಪ್ಪಣೆಯಾಯಿತು. ನೀಟಾಗಿ

ನಿಂತನು. ತಲೆಯನ್ನು ತಗ್ಗಿಸಿರಲಿಲ್ಲ. ಕೈದಿಗಳನ್ನು ವಿಚಾರಿಸುವ ವಕೀಲನು ಇವನನ್ನು ಪ್ರಶ್ನಿಸುವಾಗ ಓಸ್ಕಾರನು ಹೆದರದೆ, ಅಪರಾಧದ ಅಳುಕಿಲ್ಲದೆ ಉತ್ತರವನ್ನು ಕೊಡುತ್ತಿದ್ದನು.

'ನೀನು ಕ್ಯಾಪ್ಟನ್ನನ ಸಾಕ್ಷಿಯನ್ನು ಪೂರ್ಣವಾಗಿ ಕೇಳಿದಿಯಾ?'

'ಹೌದು ಕೇಳಿದ್ದೇನೆ.'

'ನಿನ್ನ ಬಗ್ಗೆ ಹೇಳಿದ ಮಾತುಗಳೆಲ್ಲವೂ ನಿಜವಾದವುಗಳೆಂದು ಒಪ್ಪುತ್ತೀಯಾ?'

'ಇಲ್ಲ. ರಾಯರೇ, ಒಪ್ಪಲಾರೆ. ಒಂದಕ್ಷರವೂ ನಿಜವಿರುವದಿಲ್ಲ.'

'ಕ್ಯಾಪ್ಟನ್ನನನ್ನು ಹೊಡೆಯುವುದರಲ್ಲಿ ನೀನೂ ಸೇರಿಕೊಂಡಿದ್ದಿಯಾ?'

'ಇಲ್ಲ. ಯಾವ ತರಹದ ಭಾಗವನ್ನೇ ನಾನು ವಹಿಸಿರುವದಿಲ್ಲ.'

'ಬೇರೆ ಕೈದಿಗಳಿಗೆ ಇವನನ್ನು ಕೊಲೆ ಮಾಡಲು ಉಪದೇಶವನ್ನಾದರೂ ಮಾಡಿರುವಿಯಾ?'

'ಇಲ್ಲ. ನಾನು ಯಾರಿಗೂ ಏನೂ ಉಪದೇಶ ಮಾಡಿಲ್ಲ. ಯಾರನ್ನೂ ಪ್ರೇರೇಪಿಸಿರುವದಿಲ್ಲ. ನನಗೆ ಕ್ಯಾಪ್ಟನ್ನನ ವಿಷಯವಾಗಿ ಈಗ ಗೊತ್ತಾದಷ್ಟು ಸಂಗತಿಗಳು ಈವೊದಲು ಗೊತ್ತಾಗಿದ್ದರೆ ನಾನು ಮಾಡಬಹುದಾಗಿತ್ತು.'

'ಏನು ಮಾಡುತ್ತಿದ್ದೆ?' ಎಂದು ಗವ್ಹರ್ನರನು ತೀಕ್ಷ್ಣ ದೃಷ್ಟಿಯನ್ನು ಬೀರಿ ಓಸ್ಕಾರನನ್ನು ವಿಚಾರಿಸಿದನು.

'ಈಗೇನು ಮಾಡಿರುವರೋ–ಅದಕ್ಕೂ ಹೆಚ್ಚಿಗೆ–ಒಲು ದಿನ ನನೆಪಿರುವಂತೆ–ಬೆಚ್ಚಗೆ ಮಾಡಲು ಹೇಳುತ್ತಿದ್ದೆ.'

'ಅವನ ಬಗ್ಗೆ ನಿನಗೀಗ ಗೊತ್ತಾಗಿರುವದಾವದರೂ ಏನು–ಹೇಳು ಕೇಳುವಾ–'

'ಕ್ಯಾಪ್ಟನ್ನನೆ ಈ ಕೈದಿಗಳನ್ನು ಕೆಡಿಸಿದವನು. ಬೇಕಾದ ಹಾಗೆ ಅವರನ್ನು ಹಿಂಸಿಸುತ್ತಾನೆ. ಅವರಿಗೆ ಕೆಟ್ಟ ನಡತೆಯ ಕಿತ್ತೆಯನ್ನೇ ತೀಡ ಹಚ್ಚಿದ್ದಾನೆ.'

'ಇದು ನಿನಗೆ ಮೊದಲಿಗೇ ಗೊತ್ತಾಗಿದ್ದರೆ, ಈ ಮೊದಲು ನೀನಂದಂತೆ ಅವರಿಗೇನು ಮಾಡಲು ಉಪದೇಶಿಸುತ್ತಿದ್ದಿ?'

'ಜೀವದರಸಿಲೆ–ಹೆಣಜೀಳ ಹೊಡೆಯಿಸುತ್ತಿದ್ದೆ.'

'ಹೀಗೆಯೇ ಹೇಳುತ್ತಿದ್ದೆನೆನ್ನುವದನ್ನು ಒಪ್ಪಿಕೊಳ್ಳುತ್ತೀಯಾ?'

'ಹೌದು, ಒಪ್ಪಿಕೊಳ್ಳುತ್ತೇನೆ. ದುಷ್ಟರಿಗೆ ಬುದ್ಧಿಗಲಿಸದೆ ಬಿಡಬಾರದು.'

'ಇದಕ್ಕೂ ಮುಂದೆ ವಿಚಾರಿಸುವದು ಅವಶ್ಯಕತೆ ಉಳಿಯಲಿಲ್ಲ. ಇವನು ಪ್ರತ್ಯಕ್ಷವಾಗಿ ಹೊಡೆದಾಟದಲ್ಲಿ ಭಾಗವಹಿಸಿಲ್ಲೆಂದು ನಿರಾಕರಿಸುತ್ತಾನೆ. ಆದರೆ ಕ್ಯಾಪ್ಟನ್ನನ ದುಷ್ಟವರ್ತನೆಯ ಸಾಕ್ಷಿಯ ಬಗ್ಗೆ ಯಾವ ಮಾತೂ ಸರಿ ಹೊಂದುವಂತಿಲ್ಲ' ಎಂದು ಗವ್ಹರ್ನರನು ಬೇಲೀಫನ ಕಡೆಗೆ ಮುಖ ತಿರುಗಿಸಿ ಮಾತನಾಡಿದನು.

ಬೇಲೀಫನು ಗೋಣು ಅಲ್ಲಾಡಿಸಿದನು. ವಕೀಲನೂ ಸಹ ಉಳಿದ ಕೈದಿಗಳನ್ನು ಪುರಾವೆಗಾಗಿ ಕರೆಯಬೇಕೆಂಬ ವಿಚಾರಮಾಡಮಾಡುತ್ತ ಕರೆದರೂ ನಿರುಪಯೋಗವೆಂದು ಕೈಬಿಟ್ಟನು.

'ಈ ಆರೂ ಕೈದಿಗಳಿಗೆ ಕಾಯದೇದೃಷ್ಟಿಯಿಂದ ಯೋಗ್ಯವಾದ ಶಿಕ್ಷೆಯಾಗಲೇಬೇಕು. ಯಾಕಂದರೆ ಸೈನ್ಯದೊಳಗಿನ ಅಧಿಕಾರಿಯು ತನ್ನ ಕೆಲಸದ ಮೇಲಿರುವಾಗ ಪಾಶವೀರೀತಿಯಿಂದ ಅವನ ಮೇಲೆ ಬಿದ್ದು ಹೊಡೆದು, ಬಡಿದು ಗಾಯಗೊಳಿಸಿದ್ದಾರೆ. ಕಾರಣ ಶಿಕ್ಷೆಗೆ ಪಾತ್ರರು' ಎಂದು ಸರಕಾರೀ ವಕೀಲನು ನ್ಯಾಯಾಧೀಶರಲ್ಲಿ ಬೇಡಿಕೊಂಡನು.

ಜನಸಮೂಹದಲ್ಲಿ ಗುಣುಗುಣುವ ಧ್ವನಿಯೆದ್ದಿತು. ಅದು ಮೋನಳಿಗೆ ಅರ್ಥವಾಗಲಿಲ್ಲ. ಬೇಲೀಫನು ತೀರ್ಪನ್ನು ಓದುವ ಸಿದ್ಧತೆಯನ್ನು ನಡೆಯಿಸಿದನು.

'ಈ ಅಪರಾಧವು ಭಯಂಕರವಾದುದು; ಅಕ್ಷಮ್ಯವಾದುದು. ಇಂಥ ಕ್ಯಾಂಪಿನಲ್ಲಿ ಈ ತೆರದ ದೊಂಬೆಗಳಿಗೆ ಆಸ್ಪದವು ಸಿಕ್ಕಿದ್ದಾದರೆ ಸೈನ್ಯಖಾತೆಯ ಎಲ್ಲ ಶಿಸ್ತು ಹಾಳಾಗಿ ಮಣ್ಣುಗೂಡುವದು. ಆದುದರಿಂದ ಇಂಥ ದೊಂಬೆಗಾರರನ್ನು ಶಿಕ್ಷಿಸುವದು ಸರಕಾರದ ಕರ್ತವ್ಯ

ವಾಗಿರುತ್ತದೆ..' ಎಂಬ ವಾಕ್ಯವು ಪೂರ್ಣವಾಗುವಷ್ಟರಲ್ಲಿ ಬಾಗಿಲದ ಸಂದಿನೊಳಗಿಂದ ಒಬ್ಬ ಹೆಣ್ಣುಮಗಳ ಧ್ವನಿಯೊಂದು 'ರಾಯರೇ, ಒಂದು ನಿಮಿಷ ತಡೆಯಬೇಕಾಗಿ ವಿನ್ನಹ' ಎಂದು ಕೇಳಬಂದಿತು.

ಮುಂಭಾಗಕ್ಕೆ ಹೋಗಲು ಮೋನಳು ಜನಸಂದಣಿಯೊಳಗಿಂದ ನುಗ್ಗಿದಳು. ಸರಕಾರಿಯ ವಕೀಲನಿಗೆ ಆವಳ ಗುರುತು ಸಿಕ್ಕಿತು. ತನ್ನ ಪರವಾಗಿ ಇವಳೂ ಮಾತನಾಡಲು ಬಂದಿರಬಹುದೆಂಬ ಕಲ್ಪನೆಯಿಂದ ಆ ವಕೀಲನು ಎದ್ದು ನಿಂತು 'ನಾನು ನನ್ನ ಆರಂಭದ ಭಾಷಣದಲ್ಲಿ ಒಬ್ಬ ತರುಣ ಸ್ತ್ರೀಯು ಈ ಕ್ಯಾಪ್ಟನ್ನನ ಜೀವನನ್ನುಳಿಸಿದಳೆಂದು ಹೇಳಿದುದು ತಮ್ಮೆಲ್ಲರ ಸ್ಮರಣೆಯಲ್ಲಿರಬಹುದು. ಅವಳೇ ಇವಳು. ನ್ಯಾಯಾಸ್ಥಾನದ ಚಿತ್ತಕ್ಕೆ ಬಂದರೆ, ಇವಳು ಹೇಳಬಯಸುವದನ್ನು ಕೇಳಬೇಕೆಂದು ಬೇಡು ತ್ತೇನೆ. ಅಂದರೆ ಈ ನೀಚ ಕೈದಿಗಳ ಸ್ವಭಾವದ ಬಗ್ಗೆ ನಿಮಗೆಲ್ಲರಿಗೂ ಇನ್ನಿಷ್ಟು ತಿಳಿವಳಿಕೆಯಾಗಲು ಅನುಕೂಲವಾಗುವದು' ಎಂದು ಮಾತ ನಾಡಿದನು.

'ಅಲ್ಲ–ಕೈದಿಗಳ ವಿಷಯವಾಗಿ ಸರ್ವಥಾ ಅಲ್ಲ. ನಾನು ಹೇಳ ಬಯಸುವದು–ಕ್ಯಾಪ್ಟನ್ನನ ವಿಷಯಕ್ಕೆ' ಎಂದು ಮೋನಳು ಸ್ಪಷ್ಟವಾಗಿ ಹೇಳಿದಳು.

ಜನಸಂದಣಿಯಲ್ಲಿ ಮತ್ತಿಷ್ಟು ಗಲಿಬಿಲಿಗೆ ಪ್ರಾರಂಭವಾಯಿತು. 'ಹಾಗಾದರೆ ತನಗೆ ಹೇಳಲಿರುವದನ್ನು ಆ ಸ್ತ್ರೀಯು ಹೇಳಬಹುದು' ಎಂದು ಬೇಲೀಫನು ಅವಳಿಗೆ ಸಾಕ್ಷಿಯ ಪೆಟ್ಟಿಗೆಯಲ್ಲಿ ನಿಲ್ಲಲು ಆಜ್ಞೆ ಮಾಡಿದನು.

ಸಾಕ್ಷಿಯ ಪೆಟ್ಟಿಗೆಯಲ್ಲಿ ನಿಂತುಕೊಂಡು, ದೇವರನ್ನು ಸ್ಮರಿಸಿ ಸತ್ಯವನ್ನು ಹೇಳುವೆನೆಂಬ ಆಣೆಯನ್ನು ತಿಂದು, ನ್ಯಾಯಾಧೀಶರು, ವಕೀ ಲರು, ಅಪರಾಧಿಗಳು, ಪ್ರೇಕ್ಷಕರು ಇವರೇ ಮೊದಲಾದವರ ಸಮಕ್ಷಮ ದಲ್ಲಿ ಮಾತನಾಡುವ ಪ್ರಸಂಗ ಬಂದುದಕ್ಕಾಗಿ ತುಸು ಬೆದರಿದಳು. ಮುಖದ ಮೇಲೆ ಬೆವರಿನ ಹನಿಗಳು ಪಟಪಟನೆ ಉದುರಿದವು. ಆದರೂ ಮಾತನಾಡಿದನ್ನು ಗಟ್ಟಿಯಾಗಿ ಧೈರ್ಯದಿಂದಲೇ ಹೇಳಿದಳು.

'ಈ ಕ್ಯಾಪ್ಟನ್ನನ ಬಗ್ಗೆ ನಿನಗೇನು ಗೊತ್ತಿದೆ? ಅದನ್ನು ಮರೆ ಮಾಚದೆ ಹೇಳು' ಎಂದು ಗವ್ಹರ್ನರನು ವಿಚಾರಿಸಿದನು.

'ಇವನಂಥ ದುಷ್ಟರು ಯಾರೂ ಇಲ್ಲ. ಸೈನ್ಯಕ್ಕೆಲ್ಲ ಈ ನೀಚನಿಂದ ಅಪಮಾನ; ಕುಂದು' ಎಂದಾರಂಭಿಸಿದಳು.

ಗವ್ಹರ್ನರನು ಕನ್ನಡಕವನ್ನು ಹಾಕಿಕೊಂಡು ಅವಳನ್ನು ದಿಟ್ಟಿಸಿ ನೋಡಿ, 'ತರುಣಿಯೇ, ಸೈನ್ಯದ ಬಗ್ಗೆ ನಿನಗೆ ಗೊತ್ತಿದ್ದಂತೆ ಕಾಣುವದು. ನೀನು ಧರಿಸಿರುವ ಆ ಪದಕವಾವುದು?' ಎಂದು ಉಪಹಾಸ್ಯದಿಂದ ಪ್ರಶ್ನೆ ಮಾಡಿದನು.

'ಅದು ವ್ಹಿಕ್ಟೋರಿಯಾ ಕ್ರಾಸು. ಯುದ್ಧದಲ್ಲಿ ವೀರಸ್ವರ್ಗವನ್ನು ಪಡೆದ ನನ್ನ ಅಣ್ಣನು ಸಂಪಾದಿಸಿದುದು. ಅರಸರು ನನ್ನ ತಂದೆಯ ಕಡೆಗೆ ಕಳಿಸಿಕೊಟ್ಟಿದ್ದಾರೆ' ಎಂದು ಗೋಣು ಮೇಲಕ್ಕೆತ್ತಿ ಗಂಭೀರ ಳಾಗಿ ಉತ್ತರವನ್ನಿತ್ತಳು.

ಗವ್ಹರ್ನರನ ಮೂಗಿನ ಮೇಲಿನ ಕನ್ನಡಕವು ತುಸು ಕೆಳಗೆ ಸರಿ ಯಿತು; ಸೆಟೆದು ಕುಳಿತನು. ಆ ಮೇಲೆ ಬೇಲೀಫನು ಮತ್ತೆ ಪ್ರಶ್ನೆ ಕೇಳಿದನು.

'ಕ್ಯಾಪ್ಟನ್ನನ ವಿಷಯಕ್ಕೆ ನೀನು ಹೇಳುವದು ನಿನಗೆ ಬಂದ ಅನುಭವದಿಂದಲೋ ಅಥವಾ ಕೇಳಿಕೆಯ ಮಾತಿನಿಂದೋ?'

'ರಾಯರೇ, ಸ್ವಂತ ಅನುಭವದಿಂದ.'

'ಹೂ, ಹಾಗಾದರೆ ಹೇಳು.'

ಸಾಕ್ಷಿಯು ಪೆಟ್ಟಿಗೆಯ ಸಳಿಯನ್ನು ಹಿಡಿದುಕೊಂಡಳು; ಮೈಕೈ ನಡುಗುತ್ತಿತ್ತು. ಮಾತನಾಡಬೇಕೆಂದು ಹವಣಿಸಿದಳು. ಬಾಯಿಯಿಂದ ಶಬ್ದಗಳೇ ಹೊರಡಲೊಲ್ಲವು. ಕಣ್ಣನ್ನರಳಿಸಿ ತನ್ನಷ್ಟಕ್ಕೆ ತಾನೇ 'ಏನಾ ಗಿದೆ ನನಗೆ' ಎಂದು ಮನಸಿನಲ್ಲಿಯೇ ವಿಚಾರಿಸಿಕೊಂಡಳು; ಧೈರ್ಯ ತಂದುಕೊಂಡಳು. ಕ್ಯಾಪ್ಟನ್ನನು ತನ್ನ ಮೈಮೇಲೆ ಕೈಮಾಡ ಬಂದ ಸುದ್ದಿಯನ್ನು ಸಾದ್ಯಂತವಾಗಿ ವಿವರಿಸಿದಳು. ಅವಳು ಹೇಳುತ್ತಿರು ವಾಗಿನ ಕೋರ್ಟಿನ ಶಾಂತತೆಯು ಹೇಳುವದು ಮುಗಿದ ಮೇಲೂ

ಎಷ್ಟೋ ಹೊತ್ತಿನವರೆಗಿದ್ದಿತು. ಬೇಲೀಫನು ಓಸ್ಕಾರನ ಕಡೆಗೆ ನೋಡುತ್ತ ಪ್ರಶ್ನೆಮಾಡಿದನು. ಓಸ್ಕಾರನು ಇನ್ನೂ ಆ ಸಾಕ್ಷಿಯ ಪೆಟ್ಟಿಗೆಯ ಹತ್ತಿರದಲ್ಲಿಯೇ ನಿಂತಿದ್ದನು.

'ಇದು ನಿಜವೇ?'

'ಈ ಹೆಣ್ಣುಮಗಳು ಹೇಳಿಬಿಟ್ಟಳು; ಉಪಾಯವಿಲ್ಲ. ನಡೆದ ಸಂಗತಿಯೇ ಇದೆ. ನೂರು ಸಲ ನಿಜವಿದೆ' ಎಂದು ಗಡಸುದನಿಯಿಂದ ಓಸ್ಕಾರನು ಉತ್ತರವಿತ್ತನು.

ಕ್ಯಾಪ್ಟನ್ನನು ತನ್ನ ಕೆಂಪುಮೊಗವನ್ನೆತ್ತಿ 'ಇದು ಪೂರ್ಣ ಸುಳ್ಳು' ಎಂದು ಕೂಗಿಕೊಂಡನು.

'ಅದು ಹೇಗೆ?' ಎಂದು ಕೂಡಲೇ ಓಸ್ಕಾರನು ಪ್ರತಿಭಟಿಸಿದನು. ಅವನು ತನ್ನ ಕೈಯನ್ನು ಮುಂದೆಮಾಡಿ ಕ್ಯಾಪ್ಟನ್ನನನ್ನು ತೋರಿಸುತ್ತ 'ನೋಡಿರಿ! ಅವನ ಕುತ್ತಿಗೆಯ ಹತ್ತಿರ—ನಾನು ಕುತ್ತಿಗೆ ಹಿಡಿದು ದಬ್ಬಿದ ಚಿನ್ಹಗಳು ಇನ್ನೂ ಕಾಣುತ್ತಿವೆ. ಸುಳ್ಳಂತ ಸುಳ್ಳು!' ಎನ್ನುತ್ತ ಕ್ಯಾಪ್ಟನ್ನನನ್ನು ದುರುಗುಟ್ಟಿ ನೋಡಹತ್ತಿದನು.

ಆ ಚಿನ್ಹಗಳನ್ನು ಎಲ್ಲರೂ ನೋಡಬೇಕೆಂಬ ಕುತೂಹಲದಿಂದ ತಂತಮ್ಮ ಸ್ಥಳಗಳಲ್ಲಿಯೇ ಎದ್ದು ಇಣಕುತ್ತಿರುವಷ್ಟರಲ್ಲಿ ಕ್ಯಾಪ್ಟನ್ನನು ಗದ್ದವನ್ನು ಎದೆಗೆ ಹಚ್ಚಿದನು. ಅದರಿಂದ ಅವನ ಕತ್ತಿನ ಮೇಲೆ ಮೂಡಿದ ಬೆರಳುಗಳ ಚಿನ್ಹವು ಎಲ್ಲರ ಕಣ್ಣಿಗೆ ಬೀಳಲಿಲ್ಲ.

ಈ ಪ್ರಕರಣವು ಇಷ್ಟು ಬೆಳೆಯಿತೆಂದು ವಕೀಲನು ಸಾಕ್ಷಿ-ಪುರಾವೆಗಾಗಿ ಉಳಿದ ಕೈದಿಗಳನ್ನು ಕರೆಯಬೇಕೆಂಬಿಚ್ಛೆಯನ್ನು ಪ್ರಕಟಿಸಿ ಕೋರ್ಟಿನ ಅಪ್ಪಣೆಯನ್ನು ವಿಚಾರಿಸಿದನು.

ಒಬ್ಬರಾದ ಮೇಲೆ ಒಬ್ಬರಂತೆ ಐವರನ್ನೂ ಕರೆಯಲಾಯಿತು. ಎಲ್ಲರೂ ಏಕಕಂಠದಿಂದ ಅದೇ ಕಥೆಯನ್ನೇ ಹೂಗುಟ್ಟಿದರು. ಕುದುರೆಯ ಜೂಜು ಪ್ರಾರಂಭವಾದಾಗ ಕ್ಯಾಪ್ಟನ್ನನು ಪ್ರತಿ ದಿವಸ ಸಂಜೆಯಲ್ಲಿ 'ಬೆಲೆವ್ಯಾಕ್ಕೆ' ಹೋಗುತ್ತಿದ್ದನು. ತಾನು ಹೇಳಿದ ಮಾತುಗಳನ್ನು ಎಲ್ಲರೂ ಒಪ್ಪಲೇಬೇಕೆಂದು ಕೈದಿಗಳನ್ನು ಬೆದರಿಸಿ ಒಪ್ಪಿಸಿದ್ದನು. ಆದರೆ, ಪ್ರತಿ

ಸಲವೂ ತಮ್ಮ ಕುದುರೆಗಳೇ ಗೆದ್ದ ಸುದ್ದಿಯು ಅವರಿಗೆ ಹಿಂದಿನಿಂದ ತಿಳಿದುಬರುತ್ತಿತ್ತು. ಇವನು ಮಾತ್ರ ಸುಳ್ಳು ಹೇಳಿ ಅವರಿಗೆ ಸಲ್ಲಬೇಕಿದ್ದ ಹಣವನ್ನೆಲ್ಲ ಎತ್ತಿ ಹಾಕುತ್ತಿದ್ದನು.

'ಈ ಸುದ್ದಿಯನ್ನು ಕಮಾಂಡಂಟನಿಗೆ ತಿಳಿಸಬೇಕೆಂದು ಓಸ್ಕಾರನು ನಮಗೆ ಉಪದೇಶಿಸಿದನು. ನಾವು ಹಾಗೆ ಮಾಡದೆ, ಕ್ಯಾಪ್ಟನ್ನನನ್ನೇ ಮುತ್ತಿ ಜೇಬಿನಲ್ಲಿದ್ದಷ್ಟು ಹಣವನ್ನು ಸುಲಿಯಬೇಕೆಂದು ಮಾಡಿದೆವು. ಆದರೆ ನಾವು ಕುಡಿದು ದುಂದಾದ್ದರಿಂದ ಕ್ಯಾಪಿಟರಿ ಅವನನ್ನು ಚನ್ನಾಗಿ ಥಳಿಸಿದ್ದೇವೆ' ಎಂದು ಐವರೂ ಸಾಕ್ಷಿ ಹೇಳಿದರು.

'ಇದೆಲ್ಲವೂ ಸುಳ್ಳು. ಸುಳ್ಳಿನ ಸಾಮ್ರಾಜ್ಯ' ಎಂದು ಕ್ಯಾಪ್ಟನ್ನನು ಕೂಗಿಕೊಂಡನು.

'ಇಲ್ಲ, ಸುಳ್ಳಲ್ಲ. ನಿಜವಾದ ಸಂಗತಿ' ಎಂಬ ಧ್ವನಿಯೊಂದು ಕೈದಿಗಳ ಹಿಮ್ಮಗ್ಗುಲಿನಿಂದ ಕೇಳಬಂದಿತು.

'ನ್ಯಾಯಾಧೀಶರೇ, ಆಣೆಮಾಡಿ ಸತ್ಯವನ್ನೇ ಹೇಳುತ್ತೇನೆ' ಎಂದು ಕೈದಿಗಳನ್ನು ಬಂಧಿಸಿ ತಂದಂಥ ಕಾವಲುಗಾರನು ಮುಂದೆ ಬಂದನು.

'ರಾಡಕ್ಲಿಫ್', ಹೇಳುವದನ್ನೆಲ್ಲ ಎಚ್ಚರದಿಂದ ಹೇಳು. ಇಲ್ಲಿ ಸುಳ್ಳು ಬದುಕಲಾರದು, ನೆನಪಿರಲಿ' ಎಂದು ಕ್ಯಾಪ್ಟನ್ನನು ಸಿಟ್ಟಿನ ಭರದಲ್ಲಿ ಅಧಿಕಪ್ರಸಂಗಿಯಂತೆ ಬಾಯಿಬಿಟ್ಟನು.

'ಅದು ನನಗೆ ಗೊತ್ತಿದೆ. ಸುಳ್ಳು ಇಲ್ಲಿಯಷ್ಟೇ ಏಕೆ ಎಲ್ಲಿ ಹೋದರೂ ಅದಕ್ಕೆ ಜಯವಿಲ್ಲ ತಿಳಿಯಿತೇ? ಕ್ಯಾಪ್ಟನ್ನ, ಕ್ಯಾಂಪಿನಲ್ಲಿಯೇ ನಿನಗದೆಷ್ಟೋ ಸಲ ಬುದ್ಧಿ ಹೇಳಿದ್ದೇನೆ. ಇಲ್ಲಿಯೂ ನಿಜವಾದ ಸಂಗತಿಯನ್ನೇ—ಅವೇ ಮಾತುಗಳನ್ನೇ ಹೇಳುತ್ತೇನೆ. ಅದರಿಂದ ಬುದ್ಧಿ ಬಂದೀತು' ಎಂಬ ಪ್ರತ್ಯುತ್ತರವು ದೊರೆಯಿತು.

ಕೈದಿಗಳ ಪುರಾವೆಗೆ ಪುಷ್ಟಿಕರವಾಗುವಂತೆ ಆ ಕಾವಲುಗಾರನ ಸಾಕ್ಷಿಯಾಯಿತು. ಇವನು ಕೈದಿಗಳನ್ನಷ್ಟೆ ಕಾಡುವದಿಲ್ಲ. ನಮ್ಮ ಕಾವಲುಗಾರರನ್ನೂ ಸಹ ಬಹು ಪರಿಯಿಂದ ಪೀಡಿಸಿದ್ದಾನೆ.

'ಇದಿಷ್ಟೇ ಅಲ್ಲ. ಇನ್ನೂ ಬಹಳಿದೆ. ಕ್ಯಾಂಪಿನೊಳಗೆ ಶಿರೆಯನ್ನು

ತಂದವನೇ ಇವನು. ಆದರಿಂದ ಇವನು ಈಗಾಗಲೆ ಲೆಕ್ಕವಿಲ್ಲದಷ್ಟು ಗಳಿಸಿದ್ದಾನೆ. ಎರಡು ದಿನಗಳ ಹಿಂದೆ ಇವನೇ ಕುಡಿದು ಮತ್ತನಾದಾಗ ಬ್ಯಾಂಕಿನಲ್ಲಿ ೫೦೦ ಪೌಂಡುಗಳನ್ನು ಠೇವಿಟ್ಟಿದ್ದೇನೆಂದು ಅಭಿಮಾನಕೊಚ್ಚಿಕೊಂಡಿದ್ದಾನೆ.'

ಇದಕ್ಕೂ ಹೆಚ್ಚಿಗೆ ವಿಚಾರಣೆಯು ಸಾಗಿದರೆ ಕ್ಯಾಪ್ಟನ್ನನ ರಾಡಿಯೇ ಏಳುವದೆಂದು ಬಗೆದು, ಗವ್ಹರ್ನರನು ತೀರ್ಪನ್ನೀಯಲು ತ್ವರೆಪಡಿಸಿದನು. ಆರೂ ಕೈದಿಗಳಿಗೆ ಒಂದು ದಿನದ ಶಿಕ್ಷೆಯಾಯಿತು. ಅಂದಿನ ದಿನವೆಲ್ಲ ಅವರು ಬಂಧಿತರಾದ್ದರಿಂದ ಅದೇ ಶಿಕ್ಷೆಯೆಂದು ನಿರ್ಣಯಿಸಿ ಅವರೆಲ್ಲರನ್ನೂ ಮುಕ್ತಗೊಳಿಸಲಾಯಿತು.

ನ್ಯಾಯವಿಚಾರಣೆಯು ಮುಗಿದ ನಂತರ ಕಮಾಂಡಂಟನು ಕ್ಯಾಪ್ಟನ್ನನಿಗೆ ಇಂದಿನಿಂದಲೇ ಕ್ಯಾಂಪಿಗೆ ಹೋಗಕೂಡದೆಂದೂ, ನಾಳೆ ಮುಂಜಾನೆಯೇ ಸಮುದ್ರದಾಚೆಯ ಸ್ಥಳವೊಂದಕ್ಕೆ ಹೋಗಬೇಕೆಂದು ಆಜ್ಞಾಪಿಸಿದನು. 'ವೈರಿಗಳಷ್ಟೆ ಕೆಟ್ಟ ಜನರು ನಾವಿರುವನೆಂದು ಪ್ರಕಟ ಮಾಡುವ ಕೆಲವು ಜನರಿರುತ್ತಾರೆ; ಅಂಥವರಲ್ಲಿ ನೀನು ಶ್ರೇಷ್ಠನು' ಎಂದು ವ್ಯಂಗ ರೀತಿಯಿಂದ ಕ್ಯಾಪ್ಟನ್ನನಿಗೆ ಉಪದೇಶವನ್ನೂ ಮಾಡಿದನು.

ಕೋರ್ಟ್‌ ಎದ್ದಿತು. ಕಾವಲುಗಾರನು ಕೈದಿಗಳನ್ನು ಮುಂದಟ್ಟಿಕೊಂಡು ಸಾಗಿದನು. ಮೋನಳು ನಿಂತ ಸ್ಥಳದ ಹತ್ತಿರದಲ್ಲಿಯೇ ಓಸ್ಕಾರನು ದಾಟಿ ಹೋದರೂ, ಅವಳನ್ನು ಕಣ್ಣೆತ್ತಿ ಸಹ ನೋಡಲಿಲ್ಲ.

ಇಷ್ಟಾದರೂ, ಅವಳ ಭಾವೋದ್ರೇಕಗಳು ಇಳಿದ ಮೇಲೆ ಮೋನಳು ತಾನೇನು ಮಾಡಿದಳೆಂಬ ಬಗ್ಗೆ ತನ್ನಲ್ಲಿಯೇ ವಿಚಾರಮಾಡಿಕೊಂಡಳು. ಕೋರ್ಟಿನೊಳಗಿಂದ ಜನಸಮೂಹವು ಹೊರಬೀಳುವ ಗೊಂದಲ ಹೇಳತೀರದು. ಅವರೆಲ್ಲರೂ ಹೋಗಹೋಗುತ್ತ ಮೋನಳನ್ನು ಬಿರುಗಣ್ಣುಗಳಿಂದ ನೋಡದೆ ಬಿಡಲಿಲ್ಲ. ಜನರ ತಂಡವು ದೂರ ಹೋಯಿತೆಂದು ತಿಳಿದು, ಮೋನಳೂ ಹೊರಬಂದಳು. ಅಲ್ಲಿ ಗಂಡಸರು, ಹೆಂಗಸರು ಗುಂಪುಗುಂಪಾಗಿ ನಿಂತುಕೊಂಡು 'ನೋಡಿರಿ! ಇಲ್ಲಿ ಬಂದಳು! ದ್ರೋಹಿಯು! ತನ್ನ ಗೂಡನ್ನೇ ಹಾಳುಮಾಡುವಂಥ ಹುಚ್ಚುಹಕ್ಕಿಯು!

ಆ ನೀಚ ಜರ್ಮನಿಯವನನ್ನು ಬೆನ್ನುಕಟ್ಟುವದು ಬಿಟ್ಟು, ತನ್ನ ದೇಶದವನನ್ನುಳಿಸಿಕೊಳ್ಳಲು ಇವಳು ನಾಲಗೆಯನ್ನು ಬಿಗಿಹಿಡಿದಿದ್ದರೇನಾಗುತ್ತಿತ್ತು?' ಎಂದು ಮುಂತಾಗಿ ಬಾಯಿಗೆ ಬಂದ ಹಾಗೆ ಮೂದಲಿಸುವ ಮಾತುಗಳು ಮೋನಳ ಕಿವಿಗೆ ಬಿದ್ದವು. ದಾರಿಯುದ್ದಕ್ಕೂ ಇವೇ ತರಹದ ಮಾತುಗಳು ಅವಳ ಕಿವಿಯ ಮೇಲೆ ಬಿದ್ದು ಅವಳಿಗೆ ಹೇಳತೀರದಷ್ಟು ಸಂತಾಪವನ್ನುಂಟುಮಾಡಿದವು.

ಅರ್ಧ ದಾರಿಯನ್ನು ದಾಟಿ ಬಂದಿದ್ದಳು; ಜನರ ಆ ಎದೆ ಬಿರಿಯುವ ಮಾತುಗಳೂ ಕೇಳಿಸದಾಗಿದ್ದವು. ಅಷ್ಟರಲ್ಲಿ ಕಮಾಂಡಂಟನ ಮೋಟಾರು ಬಂದಿತು. ಅವಳನ್ನು ಮಾತನಾಡಿಸಬೇಕೆಂದು ಕಮಾಂಡಂಟನು ಮೋಟಾರನ್ನು ನಿಲ್ಲಿಸಿದನು.

'ವಸ್ತುಸ್ಥಿತಿಯ ಮೇಲಿಂದಲೂ, ನ್ಯಾಯದೃಷ್ಟಿಯಿಂದಲೂ ನೀನು ಹೇಳಿದ ಮಾತುಗಳೆಲ್ಲವೂ ನಿಜವಿವೆ; ಸರಿಯೆಂದೂ ನಾನು ಒಪ್ಪುತ್ತೇನೆ. ಆದರೆ ತಂಗಿಯೇ, ನಿನ್ನ ದಾರಿ ಬೇರೆಯಾದ್ದರಿಂದ ನನಗೆ ಬಹಳ ವ್ಯಸನವಾಗಿದೆ' ಎಂದು ಗಂಭೀರ ಮುಖಮುದ್ರೆಯಿಂದ ಮಾತನಾಡಿ ಮುಂದೆ ಸಾಗಿದನು.

ಕೈದಿಗಳು ಇವಳಿಗಿಂತ ಅದೆಷ್ಟೋ ಮೊದಲಿಗೆ ಕ್ಯಾಂಪನ್ನು ಮುಟ್ಟಿದ್ದರು. ಮೋನಳು ಕೋರ್ಟಿನಲ್ಲಿ ಮಾತನಾಡಿದ ಸುದ್ದಿಯು ಐದೂ ಕಂಪೌಂಡುಗಳಲ್ಲಿಯೂ ಕಾಡುಬೆಂಕಿಯಂತೆ ಹಬ್ಬಲು ತಡವಾಗಲಿಲ್ಲ. ಅವಳು ಎರಡನೆಯ ಕಂಪೌಂಡಿನ ಹತ್ತಿರ ಬಂದೊಡನೆ, ಮೊದಲು ಯಾರು ಇವಳನ್ನು ಕಂಡು ಅಸಭ್ಯವರ್ತನೆಯಿಂದ ಅಪಮಾನಗೊಳಿಸಿದ್ದರೋ— ಅಂಥ ಕೈದಿಗಳೆಲ್ಲರೂ ಈಗ ಬೇಲಿಯ ಸಮೀಪಕ್ಕೆ ಓಡುತ್ತ ಬಂದು ಅವಳಿಗೆ ತಮ್ಮ ಧನ್ಯವಾದಗಳನ್ನು ಅರ್ಪಿಸುವ ಕೃತಜ್ಞಬುದ್ಧಿಯಿಂದ ತಮ್ಮ ಟೊಪ್ಪಿಗೆಗಳನ್ನು ತೆಗೆದು ಸ್ವಾಗತಿಸಿದರು. ಆದರೆ ಮೋನಳು ಅವರ ಕಡೆಗೆ ಕಣ್ಣು ಸಹ ಹಾಕದೆ ತನ್ನ ಮನೆಯನ್ನು ಪ್ರವೇಶಿಸಿದಳು. ಮಾನಾಪಮಾನದ ಪ್ರಶ್ನೆಯಿದ್ದುದರಿಂದ ಅವಳ ಮನಸು ತೀರ ವಿಹ್ವಲವಾಗಿತ್ತು.

ದಿನದ ದುಡಿತವು ಅವಳಿಗೆ ತಲೆಭಾರವಾಗಿತ್ತು. ದಣಿದು ಸಂಜೆಗೆ

ಮನೆಗೆ ಬಂದಳೆಂದರೆ ಅಗ್ಗಿಷ್ಟಿಗೆಯ ಮುಂದಿರಿಸಿದ್ದ ತನ್ನ ತಂದೆಯ ಆರಾಮ ಕುರ್ಚಿಯ ಮೇಲೆ ಬಿದ್ದುಬಿಡುತ್ತಿದ್ದಳು. ರಾತ್ರಿಯ ಊಟದ ಪರಿವೆಯೂ ಕೂಡ ಅವಳಿಗೆ ಉಳಿಯದಾಯಿತು. ಅಲ್ಲಿಯೇ ಬಿದ್ದು ಕೊಂಡು ರಾತ್ರಿಯನ್ನು ಕಳೆಯುವಳು. ಅವಳಿಗೆ ಜೀವನವೇ ನೀರಸ ವೆನಿಸುತ್ತಿರಬಹುದು.

ತನ್ನ ಸದಸದ್ವಿವೇಕ ಬುದ್ಧಿಯ ವಿರುದ್ಧ ಬಂಡನ್ನೆಬ್ಬಿಸಿದ ಗುಟ್ಟನ್ನು ತಾನೇ ಮರೆತುಬಿಡಲು ಯತ್ನಿಸುತ್ತಿದ್ದ ಅವಳು, ಅಂದು ಕೋರ್ಟಿನಲ್ಲಿ ರಟ್ಟಾಯಿತೆಂದು ಬಲು ನೊಂದುಕೊಂಡಳು.

ಅವಳು ಜರ್ಮನ್ನನೊಬ್ಬನನ್ನು ಪ್ರೀತಿಸುತ್ತಾಳೆ. ಈ ಜಾತಿಯನ್ನು ಇವಳಷ್ಟು ಯಾರೂ ಹಿಂದೆ ದ್ವೇಷಿಸಿರಲಿಕ್ಕಿಲ್ಲ! ಆದರೆ ಈಗ ದ್ವೇಷದ ಬದಲು ಪ್ರೇಮವುಂಟಾಗಿದೆ. ಇವಳ ಈ ಪರಿವರ್ತನೆಯನ್ನು ಜನರು ಕುತ್ಸಿತಬುದ್ಧಿಯಿಂದ ನೋಡುತ್ತಿದ್ದರು. ತಂದೆಯ ಮರಣಕ್ಕೆ ಇವಳೆ ಕಾರಣಳೆಂದು ಜನರು ಹಿಂದೂ ಅಂದಿದ್ದರು. ಅಂದೂ ಮಾತಾಡಿ ದರು. ಅದರಿಂದಂತೂ ತಂದೆಯನ್ನು ಎರಡನೆಯ ಸಲ ಕೊಂದು, ಅಪ ಕೀರ್ತಿಯ ಕಲಂಕದಿಂದ ಅವನನ್ನು ಹುಗಿದಳೆಂದು ಆಡಿಕೊಳ್ಳಲು ಜನರಿಗೆ ಸಂಶಯವಿಲ್ಲದಾಯಿತು.

'ನನ್ನಿಂದ ನಿಗ್ರಹಿಸುವದು ಅಸಾಧ್ಯವಾಯಿತು' ಎಂಬ ಮಾತು ಗಳೂ ಅವಳಿಗೆ ಸಮಾಧಾನವನ್ನು ಈಗ ಕೊಡಲಾರದಾದವು. ಅವಳ ಮನೋವೇದನೆಗೆ ಉಪಾಯವೇ ಇಲ್ಲದಾಯಿತು.

ಅವಳು ತನ್ನ ಜಾತಿಯನ್ನು ತ್ಯಜಿಸಿದಂದಿನಿಂದ ಈ ಸ್ಥಳದಿಂದ ತಾನು ಎಲ್ಲಿಗಾದರೂ ಓಡಿ ಹೋಗುವದೇ ಉಚಿತವೆಂದೂ, ನಾಕಾ ಲೋಯಾ ದಲ್ಲಿರುವದು ಅಸಾಧ್ಯವಾದುದೆಂದೂ ಗೊತ್ತುಮಾಡಿಕೊಂಡಳು. ಆದರೆ ಓಸ್ಕಾರನ ಚಿತ್ರವು ಕಣ್ಮುಂದೆ ಬಂದು ನಿಲ್ಲುವದು. 'ನನ್ನಿಂದ ಅಗಲಿರುವದು ಎಂದಿಗೂ ಆಗದ ಮಾತು' ಎಂಬ ಕೂಗು ಅವರ ಹೃದಯ ದಲ್ಲಿ ಕಲಮಲವನ್ನೆಬ್ಬಿಸುವದು. ಓಸ್ಕಾರನು ಕೋರ್ಟಿನಲ್ಲಿ ಹೇಳಿದ ಮಾತುಗಳು ನೆನಪಾಗಿ 'ನಾನೇಕೆ ಹಾಗೆ ಹೇಳಿದೆ' ಎಂಬ ವಿಚಾರವೂ ಅವಳನ್ನು ಬಾಧಿಸದೆ ಬಿಡಲಿಲ್ಲ.

ರಾತ್ರಿಯಾಯಿತೆಂದು ಮೋನಳು ಬಾಗಿಲವನ್ನು ಇಕ್ಕ ಹೋದಳು. ಬಾಗಿಲ ಸಂದಿನೊಳಗೆ ಸಿಕ್ಕ ಒಂದು ಪತ್ರವು ಅವಳಿಗೆ ಕಾಣಿಸಿತು. ಕೈದಿಗಳ ಉಪಯೋಗಕ್ಕಾಗಿ ಕೊಟ್ಟ ಕಾಗದವೆಂದು ಮೇಲೆಯೇ ಹೇಳಬಹುದು. ಅದರ ಮೇಲೆ ಬರೆದ ಹಸ್ತಾಕ್ಷರಗಳನ್ನು ಅವಳೆಂದೂ ಈ ಮೊದಲು ನೋಡಿರಲಿಲ್ಲ. 'ದೇವರು ನಿನಗೆ ಕಲ್ಯಾಣಮಾಡಲಿ' ಎಂಬ ಮೂರೇ ಶಬ್ದಗಳು ಆ ಪತ್ರದಲ್ಲಿ ಬರೆಯಲ್ಪಟ್ಟಿದ್ದವು.

ಅದನ್ನು ಓದಿದವಳೆ ಸಹಜವಾಗಿ ಮೇಲಕ್ಕೆತ್ತಿ ಅದನ್ನು ಮುದ್ದಿಸಿದಳು. ಆ ಪತ್ರವು ಅವಳಿಗೊಂದು ತರಹದ ಉತ್ಸಾಹ, ಪರುಷವನ್ನುಂಟು ಮಾಡಿತು. ಆದರೆ ಮರುಕ್ಷಣದಲ್ಲಿಯೆ, ಆ ಹಳೆಯ ಅಧೈರ್ಯವು ಅವಳನ್ನು ಮುತ್ತಿತು; ಕುಗ್ಗಿದಳು.

'ನನ್ನಿಂದ ಸಾಧ್ಯವಾಗಲಿಲ್ಲ. ಕೈಮೀರಿತು. ದೇವರೇ ನನ್ನನ್ನು ಕ್ಷಮಿಸು' ಎಂದು ಬಿಸಿಸುಯ್ಯುತ್ತ ಅಟ್ಟವನ್ನು ಹತ್ತಿಹೋದಳು.

---

## ಸೋಲು

ಕ್ರಿಸ್‌ಮಸ್ ಮತ್ತೆ ಬಂದಿತು–ಯುದ್ಧದ ಕೊನೆಯ ಕ್ರಿಸ್‌ಮಸ್. ಯುದ್ಧವನ್ನು ಹೂಡಿದ ದೇಶಗಳ ಸರಕಾರದವರು ಇಡಿ ಯುರೋಪದಲ್ಲಿಯ ಕ್ಯಾಂಪುಗಳನ್ನೆಲ್ಲ ಪರೀಕ್ಷಿಸಲು ಸ್ವಿತ್ಸರ್ಲಂಡದ ಇಬ್ಬರು ಡಾಕ್ಟರರನ್ನು ನಿಯಮಿಸಿದ್ದಾರೆ. ಅವರು ಈಗ ನೌಕಾಲೋಯ್‌ಕ್ಕೆ ಬಂದಿದ್ದಾರೆ.

ಅವರು ಐದೂ ಕಂಪೌಂಡುಗಳನ್ನು ಕೂಲಂಕಷವಾಗಿ ನಿರಿಕ್ಷಿಸಿ ಹಾಲನ್ನು ಪರೀಕ್ಷಿಸಲು ಈ ಒಕ್ಕಲುಮನೆಗೆ ಬಂದರು. ಅವರ ಮುಖಲಕ್ಷಣಗಳ ಮೇಲಿನಿಂದ ಬಲು ಒಳ್ಳೆಯುವರೆಂದು ಒಡೆದು ಕಾಣುತ್ತಿತ್ತು. ಮೋನಳು ಅವರನ್ನು ಬರಮಾಡಿಕೊಂಡು ಚಹಾ ತೆಗೆದುಕೊಳ್ಳಬೇಕೆಂದು ಬಿನ್ನವಿಸಿಕೊಂಡಳು.

ಮೋನಳ ಕಡೆಗೆ ವಿಶೇಷ ಲಕ್ಷವನ್ನು ಕೊಡದೆ ಅಡುಗೆಮನೆಯಲ್ಲಿ

ಕುಳಿತುಕೊಂಡು ಕೈದಿಗಳು ಹೇಳಿದ ತಕರಾರುಗಳ ಬಗ್ಗೆ ಆ ಡಾಕ್ಟರ ರಿಬ್ಬರೂ ಚರ್ಚಿಸುತ್ತಿದ್ದರು. ಕೈದಿಗಳಲ್ಲೊಬ್ಬನು ತನಗೆ ಕೊಳೆತ ಬಟಾಟೆಯು ಬಂದಿದ್ದರಿಂದ ತಿನ್ನಲಾಗಲಿಲ್ಲೆಂದು ಹೇಳಿದ್ದನು. ಆ ಡಾಕ್ಟರರಿಗೆ ಎಲ್ಲವನ್ನೂ ತೋರಿಸಲು ಹೊರಟ ಕಾವಲುಗಾರರ ಮುಖ್ಯಸ್ಥನು 'ಒಂದು ಶಬ್ದವನ್ನೂ ನಂಬಲಾಗದು. ಈ ಮನುಷ್ಯನು ಸುಳ್ಳು ಹೇಳುವದರಲ್ಲಿ ಶೂರನು' ಎಂದು ಅವರಿಗೆ ಹೇಳಿದ್ದರಿಂದ ಆ ಕೈದಿಯು ಮುಂದೇನೂ ಬಾಯಿತೆಗೆಯಲಿಲ್ಲ.

'ಅವನು ನಿಜವಾಗಿಯೇ ಸುಳ್ಳು ಹೇಳಿದನೆಂದು ನಾನು ನಂಬಿದ್ದೇನೆ' ಎಂದು ಒಬ್ಬ ಡಾಕ್ಟರನೆಂದನು.

'ಆದರೆ ಆ ಕಾವಲುಗಾರರ ಮುಖ್ಯಸ್ಥನು ಪಶುವಿನಂತಿದ್ದಾನೆ' ಎಂದು ಎರಡನೆಯವನು ಉತ್ತರವನ್ನಿತ್ತನು.

'ಎಲ್ಲ ದೇಶದ ಕ್ಯಾಂಪುಗಳಲ್ಲಿಯೂ—ಅದರಲ್ಲಿಯೂ ಜರ್ಮನಿಯಲ್ಲಿಯೂ ಹೀಗೆಯೇ ಇರುತ್ತದೆಯೇ' ಎಂದು ಮೋನಳು ವಿಚಾರಿಸದೆ ಬಿಡಲಿಲ್ಲ.

'ಅಲ್ಲಿಯಷ್ಟು ಕೆಡಕು ಯಾವ ಕ್ಯಾಂಪಿನಲ್ಲಿಯೂ ಇಲ್ಲ. ಜರ್ಮನಿಯೊಳಗಿನ ಕ್ಯಾಂಪಿನಲ್ಲಿಯ ಕೆಲವು ಅಧಿಕಾರಿಗಳಿಗೆ ಮಾನವಪ್ರಾಣಿಯ ಬಗ್ಗೆ ಕನಿಕರವುಂಟಾಗುವದು ಜಗತ್ತಿನಲ್ಲಿ ಅಸಾಧ್ಯವಾದ ಮಾತು. ನಿಮ್ಮ ಬ್ರಿಟಿಶ್ ಕೈದಿಗಳಲ್ಲಿ ಕೆಲವರಂತೂ ಬಲು ಕಷ್ಟದಿಂದ ತಮ್ಮ ಜೀವವನ್ನು ನೂಕುತ್ತಿದ್ದಾರೆ. ಅವರ ಜೀವನವನ್ನು ನೋಡಿ ನಾವು ಮರಗಿದುದು ಅಷ್ಟಿಷ್ಟಲ್ಲ.'

'ಅದು ಯುದ್ಧದ ರಾಕ್ಷಸೀವೃತ್ತಿಯ ಫಲವು. ಯುದ್ಧದಲ್ಲಿ ಜೀವ ಕಳೆದುಕೊಂಡ ಮನುಷ್ಯರನ್ನು ಹುತಾತ್ಮರೆಂದೂ, ಶೂರ, ಧೀರರೆಂದೂ ಹೆಸರಿಟ್ಟು ಕರೆಯುತ್ತಾರೆ. ಯುದ್ಧದಲ್ಲಿ ಜಯಸಂಪಾದಿಸಿದವರನ್ನು ಪಶುಗಳು, ರಾಕ್ಷಸರೆಂದು ಹೆಸರಿಡುತ್ತಾರೆ.'

'ಗೆಳೆಯಾ, ಯಾವಾಗಲೂ ಹಾಗೆ ಕರೆಯುತ್ತಿರುವದಿಲ್ಲ.'

'ಇಲ್ಲವೆ? ಹಾಗಿದ್ದರೆ ಒಳ್ಳೆಯದೆ.'

ತನ್ನ ಚರ್ಚೆಯನ್ನು ಅಷ್ಟಕ್ಕೆ ನಿಲ್ಲಿಸಿ ಅವರು ಮೋನಳ ಕಡೆಗೆ ತಿರುಗಿದರು. ಅವಳ ಮನೆಯ ಸ್ವಚ್ಛತೆಯನ್ನು ಕಂಡು ಧನ್ಯವಾದಗಳನ್ನು ಕೊಟ್ಟರು. ಅವಳಿಗೇನಾದರೂ ಯಾವುದೇ ತರಹದ ಸಹಾಯವು ಬೇಕಾಗಿದೆಯೇ ಎಂದು ವಿಚಾರಿಸಲಾಯಿತು.

ಓಸ್ಕಾರನ ವಿಷಯವನ್ನು ಅವರ ಮುಂದೆ ಹೇಳಲು ಹೆದರಿ, ತಾನೊಬ್ಬಳೇ ಇದರ ವ್ಯವಸ್ಥೆಯನ್ನು ಮಾಡುತ್ತಿರುವೆನೆಂದು ಅವರಿಗೆ ಹೇಳಿದಳು.

'ಬಲು ಆಶ್ಚರ್ಯ! ಹತ್ತು ಜನರು ತನ್ನ ಕೈಗಳಿಂದ ಮಾಡುವ ಕೆಲಸಕ್ಕಿಂತಲೂ ಒಬ್ಬನೇ ಒಬ್ಬನು ಮನಸಿನಿಂದ ಮಾಡುವ ಕೆಲಸವು ನೂರಾರು ಪಾಲು ಮೇಲು' ಎಂದು ಅವರಲ್ಲೊಬ್ಬನೆಂದನು.

'ಯುದ್ಧದಲ್ಲಿಯೂ ಹಾಗೆಯೇ. ಅದಕ್ಕಾಂತಲೇ ಈ ದೇಶದವರು ಗೆದ್ದರು; ಜರ್ಮನ್ನರು ಬಿದ್ದರು' ಎಂದು ಇನ್ನೊಬ್ಬನು ಹೇಳಿದನು.

'ಏನು ಜರ್ಮನ್ನರು ಸೋತರೆ? ಯುದ್ಧವು ಮುಗಿಯಿತೇ?' ಎಂದು ಮೋನಳು ಸಖೇದಾಶ್ಚರ್ಯದಿಂದ ವಿಚಾರಿಸಿದಳು.

'ತಂಗೀ, ಯುದ್ಧವು ಮುಗಿದಂತೆಯೆ. ಅದರಲ್ಲೇನು ಸಂಶಯವಿಲ್ಲ. ನಿಮ್ಮ ವೈರಿಗಳು ಕಟ್ಟಕಡೆಯ ಸ್ವಾರಿಯನ್ನು ಮಾಡಬಹುದು; ಆದರೆ ಇನ್ನೇನು ಯುದ್ಧವು ಹೆಚ್ಚು ದಿನ ನಡೆಯಲಾರದು.'

ಮೋನಳಿಗೆ ಹಿಗ್ಗು ಹಿಡಿಸದಂತಾಯಿತು. ಯುದ್ಧವು ಇಷ್ಟು ಬೇಗನೆ ಮುಗಿತಾಯವಾಗುವ ಸಂಭವವಿದೆಯೇ? ಅಂದರೆ ಅವಳಿಗೂ, ಓಸ್ಕಾರನಿಗೂ ಕೂಡಿಯೆ ಒಳಿತಾಗುವ ದಿನಗಳು ಬೇಗನೆ ಬಂದಂತಾಗುವವು.

ಓಸ್ಕಾರನು ಜರ್ಮನ್ನನಿರುವನೆಂದಿಷ್ಟೇ ಅಲ್ಲದೆ—ವೈರಿಗಳ ಜಾತಿಯವನಿರುವನರಿಂದ ತನ್ನನ್ನು ಸ್ವಜಾತೀಯರಾದ ಬ್ರಿಟಿಶರು ಹೀನ ದೃಷ್ಟಿಯಿಂದ ನೋಡುತ್ತಿರುವರೆಂಬ ಮಾತು ಅವಳಿಗೆ ಗೊತ್ತಾಗದೆ ಹೋಗಿರಲಿಲ್ಲ. ಅವರ ಪ್ರೇಮ ಪ್ರಣಯಕ್ಕೆ ಅಡ್ಡ ಬಂದುದು ಯುದ್ಧವಲ್ಲದೆ ಜಾತಿಯು ಎಂದಿಗೂ ಅಲ್ಲವೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ.

ಯುದ್ಧವು ಮುಗಿಯುತೆಂದರೆ, ಬಂದ ಎಡರು ತಾನೇ ದೂರಾಗುವದು. 'ದೇವರೇ, ಯುದ್ಧವನ್ನು ನಿಲ್ಲಿಸು, ಬೇಗ ನಿಲ್ಲಿಸು' ಎಂದು ಹಗಲಿರುಳೂ ಮೋನಳು ದೇವರಿಗೆ ಮೊರೆಯಿಡುತ್ತಿರಲಿಕ್ಕೆ ಸಾಕು.

ಈ ಕ್ರಿಸ್‌ಮಸ್‌ದಲ್ಲಿ ಹಿಂದಿನಂತಹ ವಿವಿಧ–ವಿನೋದಾವಳಿಗಳಿಗೆ ಅವಕಾಶವಿರಲಿಲ್ಲ. ಈ ದಿನಗಳಲ್ಲಿ ದೇವರ ಸೇವೆಯನ್ನು ವಿಶಿಷ್ಟ ಪ್ರಕಾರ ದಿಂದ ಮಾಡುವದೆಂದು ಗೊತ್ತಾಗಿತ್ತು. ಲುಥೆರಾನ ಧರ್ಮಬೋಧಕನು ಆ ಸೇವೆಯನ್ನು ಸಾಂಗಗೊಳಿಸಲು ನಿಯಮಿಸಲ್ಪಟ್ಟಿದ್ದನು.

ಮೋನಳು ಮರದಿಯ ಮೇಲಿನ ಕೊಟ್ಟಿಗೆಯಲ್ಲಿ ಕಟ್ಟುತ್ತಿದ್ದ ಹೋರಿಗೆ ತವುಡನ್ನು ತಿನಿಸಿ ಬರಬೇಕೆಂದು ಹೊರಟಿದ್ದಳು. ಕ್ಯಾಂಪಿನಲ್ಲಿಯ ದೇವಾಲಯದೊಳಗಿಂದ ಪ್ರಾರ್ಥನೆಯ ಹಾಡುಗಳ ಸ್ವರವು ಅವಳಿಗೆ ಕೇಳಿಸಿದ್ದರಿಂದ ತುಸು ಹೊತ್ತು ನಿಂತಲ್ಲಿಯೇ ನಿಂತು ಬಹು ಲಕ್ಷ್ಯಪೂರ್ವಕವಾಗಿ ಕೇಳತೊಡಗಿದಳು.

ನಾಳೆ ಜರುಗಲಿರುವ ದೇವರ ಸೇವೆಯ ಪೂರ್ವಸಿದ್ಧತೆಯಿರಬಹುದೆಂದು ಕಲ್ಪಿಸಿ, ಕೈದಿಗಳೆಲ್ಲರೂ ಹಾಡುತ್ತಿರುವರೆಂದೂ, ಪಿಯಾನವನ್ನು ಬಾರಿಸುವವನು ಓಸ್ಕಾರನ ಹೊರತು ಬೇರೆ ಯಾರೂ ಇರಲಾರರೆಂದೂ ಅವಳು ಸಾಧಾರಣವಾಗಿ ಗ್ರಹಿಸಿಕೊಂಡಳು.

ಹಾಡು ಯಾವುದೆಂಬುದು ಅವಳಿಗೆ ಭಾಷೆಯ ಮೂಲಕ ತಿಳಿಯದು. ಆದರೆ ಸ್ವರವು ತೀರ ಪರಿಚಿತವಾದುದು. ಅವಳು ವೆಸ್ಲಿಯನ್ ದೇವಾಲಯಕ್ಕೆ ಹೋದಾಗ ಆ ದಾಟಿಯ ಮೇಲಿನ 'ಇನ್ನೂ ದೇವರು ನಮ್ಮ ರಕ್ಷಣೆಗೆ ನಿಶ್ಚಯವಾಗಿಯೂ ಸಿದ್ಧನಿರುವ' ಎಂಬ ಹಾಡು ಕೇಳಿದ ನೆನಪು ಅವಳಿಗಾಯಿತು.

ಅದೇ ಪ್ರಾರ್ಥನೆ! ಅದೇ ಧರ್ಮ! ಅದೇ ದೇವರು! ಅದೇ ಉದ್ಧಾರಕನು! ಆದರೂ..ಇನ್ನೂ..ಎಷ್ಟೊಂದು ದುಷ್ಟತನವು ತುಂಬಿದೆ. ಎಷ್ಟು ಮೂರ್ಖತನವಿರಬಹುದು ಈ ಜಗತ್ತಿನಲ್ಲಿ!

ಕ್ರಿಸ್‌ಮಸ್ ದಿನದ ಮುಂಜಾವು. ಬೇಗನೆದ್ದು ಮೋನಳು ದನದ ಕೊಟ್ಟಿಗೆಯಲ್ಲಿಯ ಎಲ್ಲ ಕೆಲಸವನ್ನು ಲಗುಬಗೆಯಿಂದ ತೀರಿಸಿದಳು.

ಪೀಲ್ ಪಟ್ಟಣದ ದೇವಾಲಯದೊಳಗಿನ ಗಂಟೆಯ ಸಪ್ಪಳವೂ ಕೇಳಿಸಿತು. ಕ್ಯಾಂಪಿನ ಕಡೆಗೆ ಕಣ್ಣು ಬೀರಿದಳು. ಎಲ್ಲ ಕೈದಿಗಳೂ (ಓಸ್ಕಾರನೂ ಸಹಿತ) ಕ್ಯಾಂಪಿನ ದೇವಾಲಯದ ಕಡೆಗೆ ಗುಂಪುಗುಂಪಾಗಿ ಸಾಗುತ್ತಿರುವ ದೃಶ್ಯವು ಆವಳಿಗೆ ಗೋಚರಿಸಿತು.

ಒಮ್ಮೆಲೆ ಆವಳ ತಲೆಯಲ್ಲಿ ಒಂದು ಹೊಸ ವಿಚಾರಲಹರಿ ಸುಳಿದಿತು. ಧರ್ಮವು ಒಂದೇ ಇದ್ದುದಾದರೆ ತಾನೇಕೆ ಇಲ್ಲಿಯ ದೇವಾಲಯಕ್ಕೆ ಹೋಗಬಾರದು? ಅಲ್ಲಿ ಹೋಗಲು ಕಾವಲುಗಾರನು ತನ್ನನ್ನು ಬಿಡಬಹುದೇ? ಎಂಬೀ ವಿಚಾರಗಳು ತಾಕಲಾಡುತ್ತಿರುವಂತೆ ಆಟ್ಟವನ್ನೇರಿದಳು. ದೇವಾಲಯಕ್ಕೆ ಹೋಗುವ ಉಡುಪನ್ನು ತೊಟ್ಟು ಹೊರಬೀಳಬೆಟ್ಟಳು; ಇನೆಯ ಕಂಪೌಂಡಿನ ಬಾಗಿಲದ ಹತ್ತಿರಕ್ಕೆ ಬಂದಳು.

ಕ್ಯಾಂಪಿನ ದೇವಾಲಯವು ಅರ್ಧ ಥೇಟರುಪದ್ದಂತಿದ್ದು ದೊಡ್ಡದೊಂದು ಕಟ್ಟಿಗೆಯ ಕಣಜವಿದ್ದ ಹಾಗಿದೆ. ಒಂದು ತುದಿಗೆ ಎತ್ತರವಾದ ಗದ್ದುಗೆ. ಕುಳ್ಳಿರಲು ಕುರ್ಚಿಗಳಿಲ್ಲ; ನೆಲದ ಮೇಲೆ ಹಾಸುಗೆಯಿಲ್ಲ. ಗದ್ದುಗೆಯ ಮೇಲೆ ಧರ್ಮಬೋಧಕನು ಕುಳಿತಿದ್ದಾನೆ. ಆವನ ಮುಂದೆ ಒಂದು ಚಿಕ್ಕ ಮೇಜು. ಅವನ ಮೈ ಕಪ್ಪುಗೌನಿನಿಂದ ಮುಚ್ಚಿದೆ. ಬೈಬಲ್ ಪುಸ್ತಕದೊಳಗಿನ ಯಾವುದೋ ಭಾಗವನ್ನು ಓದುತ್ತಿದ್ದನು. ಆವನೆದುರಿಗೆ ನೆಲದ ಮೇಲೆ ಐದಾರುನೂರು ಜನರು ಸಾಲುಸಾಲಾಗಿ ನಿಂತಿದ್ದಾರೆ. ಅವರಲ್ಲಿ ಹುಡುಗರು, ಮುದುಕರು, ಬೆಲೆಯುಳ್ಳ ಉಡುಪನ್ನು ತೊಟ್ಟವರು, ಚಿಂದಿಚಿಂದಿಯಾದ ಬಟ್ಟೆಯಲ್ಲಿದ್ದವರು, ಬರೆಗಾಲಿನವರು, ಮನೋಹರವಾದ ಲಕ್ಷಣವುಳ್ಳವರು, ಕುಡಿತದಿಂದಲೂ ಅನೇಕ ದುರ್ವ್ಯಸನಗಳಿಗೀಡಾಗಿ ಕೊರಗಿ ಸೊರಗಿ ಸುಕ್ಕಾದವರು—ಹೀಗೆ ನಾನಾ ತರಹದ ಜನಸಮೂಹವು ಅಲ್ಲಿ ನೆರೆದಿತ್ತು. ಎಲ್ಲರೂ ಧರ್ಮಬೋಧಕನ ಕಡೆಗೆ ಏಕದೃಷ್ಟಿಯನ್ನು ಬೀರಿದ್ದಾರೆ. ಅವನು ಓದುವ ಸದ್ದಿನ ಹೊರತು ಬೇರಿನ್ನಾವ ಸದ್ದು ಅಲ್ಲಿರಲಿಲ್ಲ.

ಬಾಗಿಲ ಸರಿದ ಸಪ್ಪಳದಿಂದ ಅಲ್ಲಿಯ ಸ್ತಬ್ಧಶಾಂತತೆಯು ಭಂಗವಾಯಿತು. ಮರುಕ್ಷಣದಲ್ಲಿಯೆ ಹೆಣ್ಣುಮಗಳೊಬ್ಬಳ ಪ್ರವೇಶ

ವಾಯಿತು. ಅವಳು–'ನಾಕಾಲೋಯ್‍ದ ಸ್ತ್ರೀ' ಎಂದು ಬೇರೆ ಹೇಳುವ ಕಾರಣವೇ ಇಲ್ಲ. ಬಂದವಳೆ ಸುತ್ತೂಕಡೆಗೆ ನಿರೀಕ್ಷಿಸಿದಳು. ಎಲ್ಲರೂ ಇವಳನ್ನೆ ಬೆರಗುಗಣ್ಣುಗಳಿಂದ ನೋಡುತ್ತಿದ್ದರು. ಅಷ್ಟರಲ್ಲಿ ಯಾರದೋ ಕೈಯು ಅವಳಿಗೆ ತಾಕಿತು. ಅವಸರವಸರದಿಂದ ಒಳಗಿನ ಕೋಣೆಯಿಂದ ಒಂದು ಕುರ್ಚಿಯನ್ನು ತಂದಿಟ್ಟು, ಅದರ ಮೇಲೆ ಕುಳಿತುಕೊಳ್ಳಬೇಕೆಂದು ಅವಳಿಗೆ ಬಿನ್ನವಿಸಿಕೊಂಡನು. ಮೊದಲನೆಯ ಸಾಲಿನ ನಡುವೆ ಇರಿಸಿದ್ದ ಆ ಕುರ್ಚಿಯ ಮೇಲೆ ಅವಳು ಕುಳಿತುಕೊಂಡಳು.

ಬೋಧನೆಯು ಮುಗಿದನಂತರ ಪಾದ್ರಿಯು ಒಂದು ಹಾಡನ್ನು ಹೇಳಹತ್ತಿದನು. ನಿನ್ನೆ ರಾತ್ರಿಯಲ್ಲಿ ಅವಳ ಕಿವಿಗೆ ಬಿದ್ದ ಹಾಡೇ ಅದು; ಅವಳ ಹತ್ತಿರದಲ್ಲಿರಿಸಿದ್ದ ಪಿಯಾನವನ್ನು ಬಾರಿಸಲು ಒಬ್ಬ ತರುಣನು ಮುಂದೆ ಬಂದನು. ಇವಳೂ ಎದ್ದು ನಿಂತಳು. ಹಾಡು ಮತ್ತು ಪಿಯಾನವು ಏಕತಾನದಲ್ಲಿ ನುಡಿಯುತೊಡಗಿದವು.

ಅಲ್ಲಿದ್ದವರೆಲ್ಲರೂ ಸ್ಪಷ್ಟವಾದ ಸುಸ್ವರದ ಏಕಕಂಠದಿಂದ ತಮ್ಮ ಭಾಷೆಯಲ್ಲಿ ಹಾಡಹತ್ತಿದರು. ಅದರೊಂದಿಗೆಯೇ ವೋನಳೂ ಹಾಡನ್ನು ಅದೇ ಸ್ವರದಲ್ಲಿ ಇಂಗ್ಲಿಷ ಭಾಷೆಯಿಂದ ಹಾಡುತ್ತಿರುವಳೆಂದು ಎಲ್ಲರಿಗೂ ಗೊತ್ತಾಯಿತು.

ತುಸು ಹೊತ್ತಿನಲ್ಲಿಯೇ ಅವರೆಲ್ಲರ ಧ್ವನಿಯು ಕಡಿಮೆಯಾಯಿತು. ಆ ಇಂಗ್ಲಿಷ ಹಾಡನ್ನು ಕೇಳಲು ತಮ್ಮ ಹಾಡನ್ನು ನಿಲ್ಲಿಸಿರಬಹುದು. ಚಿತ್ರದ ಬೊಂಬೆಗಳಂತೆ ನಿಂತುಕೊಂಡು ಏಕಚಿತ್ತರಾಗಿ ಅವಳ ಆ ಕೋಮಲ ಕಂಠದಿಂದ ಹೊರಟ ಸಂಗೀತದಲ್ಲಿ ಅವರು ತಲ್ಲೀನರಾದರು; ತಲೆದೂಗಹತ್ತಿದರು.

ಹಾಡು ಮುಗಿಯಿತು. ಅವಳೂ ಕುಳಿತಳು. ಪಾದ್ರಿಯು ತನ್ನ ಉಪದೇಶವನ್ನು ಆರಂಭಿಸಿದನು. ಅಲ್ಲೊಂದಿಲ್ಲೊಂದು ಶಬ್ದ ಮಾತ್ರ ಅವಳಿಗೆ ತಿಳಿಯುತ್ತಿತ್ತು. ಅವಳ ಕಣ್ಣುಗಳು ಬಾಗಿಲದ ಕಡೆಗೆ ಹೊರಳಿದ್ದವು. ಓಸ್ಕಾರನು ಅಲ್ಲಿದ್ದನು. ಅವನ ಕಣ್ಣುಗಳು ಹೊಳೆಯುತ್ತಿದ್ದವು. ಅವಳು ಅವನನ್ನು ದಿಟ್ಟಿಸಿ ನೋಡಿ 'ದೇವರೇ, ಯುದ್ಧವನ್ನು ಬೇಗ ನಿಲ್ಲಿಸು'

ಎಂದು ಮನಸಿನಲ್ಲಿ ಧ್ಯಾನಿಸುತ್ತಿದ್ದಂತೆ ಮೋನಳ ಮುಖಚರ್ಯೆಯು ಒಡೆದು ಕಾಣುತ್ತಿತ್ತು.

ಬೇಸಿಗೆಯು ಮತ್ತೆ ಬಂದಿತು; ಸೂರ್ಯನು ಮೂಡುವನು, ಮುಳುಗುವನು. ಹಕ್ಕಿಗಳು ಹಾರುವವು, ಗೂಡು ಸೇರುವವು. ಭೂದೇವಿಯು ತನ್ನ ಪ್ರಶಾಂತವಾದ ಶಾಂತತೆಯನ್ನು ಎಂದಿನಂತೆ ಕಾಯ್ದುಕೊಂಡಿದ್ದಾಳೆ; ಆದರೆ ಯುದ್ಧವು ಇನ್ನೂ ಸಾಗಿಯೇ ಇದೆ. ಸ್ವಿಸ್ ಡಾಕ್ಟರರ ಭವಿಷ್ಯದಂತೆ ವೈರಿಗಳ ಕೊನೆಯ ದಾಳಿಯು ಆಯಿತು. ಮುಗಿದೂ ಬಿಟ್ಟಿತು. ಏರೇರಿ ಮುಂದೆ ಮುಂದೆ ಬರಬೇಕೆಂದು ಮಾಡಿದಷ್ಟಷ್ಟು ಅವರು ಹಿಂದೆ ಹಿಂದೆ ದೂಡಲ್ಪಟ್ಟರು.

ಕ್ಯಾಂಪಿನಲ್ಲಿಯು ಎಲ್ಲ ಕೈದಿಗಳಿಗೂ ಈ ಸುದ್ದಿಯು ಗೊತ್ತಾಯಿತು. ಮುಂಭಾಗದ ಸೈನಿಕರ ದೈವದಂತೆ ಅವರ ಉತ್ಸಾಹವು ಏರುತ್ತಿತ್ತು; ಬೀಳುತ್ತಿತ್ತು. ಅಸಂಖ್ಯವಾದ ಜರ್ಮನ್ನರ ಸುಸಜ್ಜಿತ ಸೈನ್ಯವು ಲಂಡನ್ನದ ಮೇಲೆ ದಾಳಿಯನ್ನಿಟ್ಟು, ಬಕಿಗ್ಯಾಂ ಅರಮನೆಯನ್ನು ಧ್ವಂಸಗೊಳಿಸಿ, ಬ್ರಿಟಿಶ್ ರಾಜ್ಯವನ್ನು ಹೇಳಹೆಸರಿಲ್ಲದಂತೆ ಮಾಡಿ, ಅಮೇರಿಕವನ್ನು ನುಂಗಲು ಹೆಣಗಾಡುವದೆಂದು ಮೊದಮೊದಲು ಕೈದಿಗಳೆಲ್ಲರೂ ಬಡಿವಾರ ಬಡಿಯುತ್ತಿದ್ದರು. ಬರಬರುತ್ತ ಕೈದಿಗಳಿಗೆ ಮಾತನಾಡಲು ಬಾಯಿಯೇ ಇಲ್ಲದಾಯಿತು. ಇಂಗ್ಲಿಷ ವರ್ತಮಾನ ಪತ್ರದಲ್ಲಿ ಜರ್ಮನ್ನರು ಸೋತರೆಂಬ ಸುದ್ದಿ ಬಂದರೂ, ಅವರು ನಂಬುತ್ತಿದ್ದಿಲ್ಲ. ಯಾಕೆಂದರೆ ಅವರ ಜರ್ಮನ್ನ ಪತ್ರಿಕೆಗಳಲ್ಲಿ ಜರ್ಮನ್ನರ ಜಯದ ಸುದ್ದಿಗಳು ಅವರಿಗೆ ತಿಳಿಯುತ್ತಿದ್ದುದರಿಂದ ಅವರು ಅಭಿಮಾನ ಪ್ರೇರಿತರಾಗುತ್ತಿದ್ದರು. ಈಗ ಅವರು ಬಾಯಿ ಹೊಲಿದುಕೊಂಡಿದ್ದಾರೆ. ಯುದ್ಧವು ಏತಕ್ಕಾಗಿ ಸಂಭವಿಸಿತು? ಯಾವುದಕ್ಕೂ ಇಲ್ಲ! ಹತ್ತುವರುಷದವಧಿಯಲ್ಲಿ ಯುದ್ಧದ ಕಾರಣವು ಏನಿತ್ತೆಂಬುದು ಕೂಡ ಯಾರಿಗೂ ಗೊತ್ತಾಗದಂತೆ ಕಾಲವು ಗತಿಸಿ, ಮರೆಯಾಗಿಸಿಬಿಡುವದು.

ಮೋನಳು ದಿಗಿಲುಗೊಂಡು ಭ್ರಮಿಷ್ಟಳಂತಾಗಿದ್ದಾಳೆ. ಕಡೆಗೊಮ್ಮೆ ಯುದ್ಧವು ಪರಿಸಮಾಪ್ತಿಗೆ ಬಂದಿತೇ? ಓಸ್ಕಾರನು ಏನು

ವಿಚಾರಮಾಡುತ್ತಿರಬಹುದು ? ತನ್ನ ಕಡೆಗೆ ಅವನು ಏಕೆ ಬಾರದಿರು ವನು? ಅವಳು ಅವನ ಮೇಲೆ ಈಗಾಗಲೆ ಸಾಕಷ್ಟು ತೊಂದರೆಯನ್ನು ಒಡ್ಡಿರುವಳೆಂದು ಅವನು ವಿಚಾರಮಾಡುತ್ತಿರಬಹುದೇ?

ಅವನು ಕೊನೆಗೊಮ್ಮೆ ಬಂದನು. ರಾತ್ರಿಯು ಬಹಳವಾಗಿತ್ತು. ಬಾಗಿಲಕ್ಕೆ ಆತು ನಿಂತುಕೊಂಡು ಅವನು ಕಂಪಿತ ಸ್ವರದಿಂದ 'ಮೋನಾ' ಎಂದು ಕೂಗುವ ಸಪ್ಪಳವು ಅವಳನ್ನು ಎಚ್ಚರಿಸಿತು. 'ಮೋನಾ' ಎಂಬ ಮಧುರವಾದ ಸ್ವರವು ಮತ್ತೊಮ್ಮೆ ಅವಳಿಗೆ ಕೇಳಿಸಿತು. ಚಟಕ್ಕನೆ ಎದ್ದಳು. 'ಮೋನಾ' ಎಂಬ ಹೆಸರಿನಿಂದ ಅವನು ಈವರೆಗೆಂದೂ ಕರೆ ದಿರಲಿಲ್ಲ.

'ಹಾ! ಬಂದೆ' ಎನ್ನುತ್ತ ಅವಳು ಹೊಸ್ತಿಲದ ಮೇಲೆ ಆಪಾದ ಮಸ್ತಕಪರ್ಯಂತ ನಡುಗುವ ಮೈಯಿಂದ ಬಂದು ನಿಂತಳು. ಅವಳ ತಂದೆಯು ತೀರಿಕೊಂಡ ದಿನದಿಂದ ಈವರೆಗೆಂದೂ ಅವ ರಿಬ್ಬರೂ ಹೀಗೆ ಎದುರು-ಬದುರಾಗಿ ನಿಂತಿದ್ದಿಲ್ಲ; ಈಗ ನಿಂತಿದ್ದಾರೆ.

'ಮೋನಾ, ಎಲ್ಲವೂ ಮುಗಿಯಿತಂತಲ್ಲ?'

'ಓಸ್ಕಾರ್, ಏನು ಮುಗಿಯಿತು?'

ಜರ್ಮನಿಯು ಗೆಲಿಯಲಿಲ್ಲ. ಹಿಂದಿನ ಬರ್ಗನ ಹಿಡಿತವು ಹದ ಗೆಟ್ಟಿದೆ; ಬರ್ಲಿನ್ ಪಟ್ಟಣದಲ್ಲಿ ಅಂತಃಕಲಹಗಳು ಹುಟ್ಟಿವೆ.'

'ಇದರಿಂದ ಯುದ್ಧವು ಮುಗಿದಂತಾಯಿತೆಂದು ಅರ್ಥವಾಗು ತ್ತದೆಯೇ?'

'ಆಗದೇನು, ಮೋನಾ.'

ಏನೋ ಮಾತಾಡಬೇಕೆಂದವಳು ಅಷ್ಟಕ್ಕೆ ಬಾಯಿ ಮುಚ್ಚಿ ತುಸು ಹೊತ್ತು ಸುಮ್ಮನಾದಳು. ಎದೆಯ ನಡುಕವನ್ನು ಸೈರಿಸುತ್ತ 'ಓಸ್ಕಾರ್, ಯುದ್ಧ ಸಮಾಪ್ತವಾದುದರಿಂದ ನಿನಗೆ ಸಂತೋಷವಾಗಿಲ್ಲವೇ?' ಎಂದು ಮೋನಳು ಆತುರತೆಯಿಂದ ವಿಚಾರಿಸಿದಳು.

ಅವನು ಅವಳನ್ನು ಕಣ್ಣಾರಳಿಸಿ ನೋಡಿಯೇ ನೋಡಿದನು. ನೆಟ್ಟ ನೋಟವು ಕಿತ್ತದಾಯಿತು. 'ನನಗೇನೂ ಗೊತ್ತಾಗದು. ಏನು ಹೇಳಲಿ?

ಹೇಳಲೂ ಬಾರದಾಗಿದೆ' ಎಂದು ಅವನು ಉತ್ತರವಿತ್ತು ಅಲ್ಲಿ ನಿಲಲಾರದೆ ತನ್ನ ಸ್ಥಳಕ್ಕೆ ತೆರಳಿದನು.

ಅವನು ಕಣ್ಮರೆಯಾಗುವವರೆಗೆ ಅವಳು ನೋಡುತ್ತಲೇ ನಿಂತಿದ್ದಳು. ಅವಳ ಕಣ್ಣುಗಳು ಮಿನುಗಿದವು. ಎದೆಯು ಹಾರಹತ್ತಿತು.

---

## ಒಪ್ಪಂದ (೧೯೧೮)

೧೯೧೮ರ ನವ್ಹಂಬರ ೧೦ನೆಯ ತಾರೀಖು. ಇಡಿ ದಿನನೆಲ್ಲ ಕ್ಯಾಂಪಿನ ಅಧಿಕಾರಿಗಳಿದ್ದ ಭಾಗದಲ್ಲಿ ಚಟುವಟಿಕೆಯಾರಂಭವಾಗಿದೆ. ಬೆಳಗಿನಿಂದಲೂ ಟೆಲಿಫೋನು ಸರಕಾರದವರೊಡನೆ ಒಂದೆಸವನೆ ಮಾತಾಡಹತ್ತಿದೆ. ಎತ್ತ ನೋಡಿದತ್ತ ಗಲಿಬಿಲಿ, ಗಡಿಬಿಡಿ ಸಾಗಿದೆ.

ಹಾ ಹಾ ಎನ್ನುವದರಲ್ಲಿ ಈ ಸುದ್ದಿಯು ಎಲ್ಲ ಕಡೆಗೂ ಪಸರಿಸಿತು. ಕ್ಯಾಂಪಿನ ಭಾಗವು ಅರಣ್ಯದಂತೆ ಭಾಸವಾಗತೊಡಗಿದೆ. ಕೈದಿಗಳು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತವರು ಏಳಲಿಲ್ಲ. ಕ್ಯಾಂಪಿನ ದಿನದ ಚಟುವಟಿಕೆಯು ಇಲ್ಲದಾಗಿದೆ. ಪ್ರಜರು ಕೈಸರನ್ನು ಸಿಂಹಾಸನದಿಂದ ತಳ್ಳಿದ್ದಾರೆ. ಜರ್ಮನ್ ದಳಪತಿಯು ಯುದ್ಧವನ್ನು ನಿಲ್ಲಿಸಲು ಬೇಡಿಕೊಂಡಿದ್ದಾನೆ. ಮಿತ್ರಸಂಘದ ಮುಖ್ಯ ಕಮಾಂಡಂಟನು ತಯಾರಿಸಿದ ಶಾಂತಿಯ ಒಪ್ಪಂದದ ಕರಾರುಪತ್ರಗಳಿಗೆ ಸಹಿ ಹಾಕಲು ಮರುದಿನ ಒಂಭತ್ತುಗಂಟೆಯವರೆಗೆ ಅವಧಿಯನ್ನಿತ್ತಿದ್ದಾನೆ. ಈ ಅವಧಿಯೊಳಗಾಗಿ ಒಪ್ಪಿ ಸಹಿಯನ್ನು ಮಾಡದಿದ್ದರೆ, ಯುದ್ಧವು ಮಾತ್ರ ಏಕೋಪಕ್ಕೆ ಹೋಗುವದು ಖಂಡಿತ. ಅವರು ಒಡಂಬಡಿಕೆಗೆ ಒಪ್ಪಿದರೆ 'ಯುದ್ಧವು ನಿಂತಿತು; ಶಾಂತಿಯು ಸ್ಥಾಪನೆಯಾಯಿತು' ಎಂಬ ಸುದ್ದಿಯು ಜಗತ್ತಿನ ತುಂಬೆಲ್ಲ ಕಳಿಸಲಾಗುವದು. ನಾಕಾಲೋಯ್‌ದಲ್ಲಿ ಮಾತ್ರ ೧೧ ಗಂಟೆಗೆ ತಿಳಿಯುವದು. ಡೊಗ್ಲಾಸ ಕೋಟೆಯಿಂದ ತೋಫುಗಳು ಹಾರಿಸಲ್ಪಡುವವು. ಬಂದರಗಳಲ್ಲಿ ನಿಂತಂಥ ಹಡಗುಗಳಿಂದ ವಾದ್ಯಗಳು ಮೊಳಗುವವು. ನಡು

ಗಡ್ಡೆಯೊಳಗಿನ ಎಲ್ಲ ದೇವಾಲಯಗಳಲ್ಲಿ ಗಂಟೆಗಳು ಬಾರಿಸುವವು—ಎಂದು ಮುಂತಾದ ಮಾತುಗಳು ಅಲ್ಲಲ್ಲಿ ಸಾಗಿವೆ.

ಮೋನಳಿಗೆ ಹರ್ಷವಾಯುವಾಗಿದೆ. ತನ್ನ ಮೊರೆಯನ್ನು ಆಲಿಸಿ, ದೇವರು ಯುದ್ಧವನ್ನು ನಿಲ್ಲಿಸಿದನೆಂದು ಹಿಡಿಸಲಾರದ ಹಿಗ್ಗು ಅವಳಿಗೆ. ಆದರೂ ಇಂಥ ಹೊತ್ತಿನಲ್ಲಿಯೂ ಅವಳು ತನ್ನ ಭಾವನೆಗಳ ಜಗ್ಗಾಟ—ನುಗ್ಗಾಟದಲ್ಲಿ ಸಿಕ್ಕುಬಿದ್ದಿದ್ದಳು. ರಾಜಿಯ ವಿಚಾರವು ಮಿಂಚಿದೊಡನೆ ಯುದ್ಧದ ಫಲವು ಸರಿಯಾಗಿಯೇ ಆಯಿತೆಂದು ಜಯಜಯಕಾರ ಮಾಡುತ್ತ ಕುಣಿದಾಡುವಳು. ಯುದ್ಧವನ್ನು ಹೂಡಿ, ಅನೇಕ ಅನಾಹುತಗಳಿಗೆ ಕಾರಣರಾದ ಕ್ರೂರ ವೈರಿಗಳಿಗೆ ಫಲವು ಚನ್ನಾಗಿ ದೊರೆತು, ಮೂಗು ತಿಕ್ಕಿದುದು ಯೋಗ್ಯವಾಯಿತೆಂದುಕೊಳ್ಳುವಳು. ಆದರೆ ಓಸ್ಕಾರನ ವಿಚಾರ ಸುಳಿದೊಡನೆ. .ಅವಳು ಏನನ್ನು ಕಲ್ಪಿಸುವಳೋ. .ತಿಳಿಯದ ಮಾತು. ಓಸ್ಕಾರನು ಈಗೆಲ್ಲಿರಬಹುದು ? ಅವನೂ ಯಾವ ರೀತಿಯಿಂದ ವಿಚಾರಮಾಡುತ್ತಿರಬಹುದೆಂಬ ಕಲ್ಪನೆಯಲ್ಲಿ ಮೋನಳು ಮಗ್ನಳಾಗಿದ್ದಳು.

ದೊಡ್ಡ ನಸುಕಿನಲ್ಲಿ ಎದ್ದಳು. ಇನ್ನೂ ಬೀದಿಯ ದೀಪಗಳು ಉರಿಯುತ್ತಿದ್ದವು. ಸಮುದ್ರದ ತೆರೆಗಳ ಸೂಯ್ ಎಂಬ ಸಪ್ಪಳದಂತಹ ಸಪ್ಪಳವು ಕ್ಯಾಂಪಿನ ತುಂಬೆಲ್ಲ ಪಸರಿಸಿಸುವದೆಂಬ ಸಂಶಯವು ಅವಳಿಗೆ ಬಂದಿತು. ರಾತ್ರಿ ಮಲಗುವ ಮೊದಲು ಇದ್ದ ಪರಿಸ್ಥಿತಿಯಷ್ಟೇ ಅವಳಿಗೆ ನೆನಪಿತ್ತು. ನಿದ್ರೆಹತ್ತಿದ ಮೇಲಾದ ಕ್ಯಾಂಪಿನ ವಾತಾವರಣವು ಅವಳಿಗೆ ತಿಳಿಯುವದು ಸಾಧ್ಯವಿರಲಿಲ್ಲ. ಕೈದಿಗಳೆಲ್ಲರೂ ಮಾತಾಡುತ್ತ ಇತ್ತಿಂದತ್ತ ಅತ್ತಿಂದಿತ್ತ ಅಲೆದಾಡುತ್ತಿದ್ದರು. ಕ್ಯಾಂಪಿನಲ್ಲಿಯ ಗದಿಬಿಡಿಯು ಅವ್ಯಾಹತವಾಗಿ ಸಾಗಿದೆ. ರಾತ್ರಿಯೂ ಹೀಗೆಯೇ ಒಂದೆಸವನೆ ಸಾಗಿರಬಹುದೋ ಏನೋ ಯಾರು ಬಲ್ಲರು ! ನಡೆದಿದ್ದರೇನೂ ಆಶ್ಚರ್ಯವಲ್ಲ.

ದಿನ ಬೆಳಗುವದೆಂದರೆ ಜರ್ಮನ್ನರಿಗೆ ಅಪಮಾನದ ಪ್ರತ್ಯಕ್ಷ ಪ್ರದರ್ಶನ! ರಾತ್ರಿಯಾದರೆ ತಮ್ಮ ಪಿತೃಭೂಮಿಯ ದೈನ್ಯಾವಸ್ಥೆಯ ನೆನಪು! ತಾವು ದೇಶವಿಲ್ಲದ ಪರದೇಶಿಗಳು; ಭೂಭಾರವಾದ ಜಗತ್ತಿನಲ್ಲಿ

ಹೊರದೂಡಲ್ಪಟ್ಟ ಮಾನವಪಶುಗಳು! ಎಂಬ ಚಡಪಡಿಕೆಯು, ಕನವರಿಕೆಯು ಅವರನ್ನು ತಲೆಯೆತ್ತದಂತೆ ಮಾಡಿತ್ತು.

ಹೊತ್ತು ಮೇಲೇರಹತ್ತಿತು. ಸುತ್ತಮುತ್ತಲೆಲ್ಲ ಗುಂಪುಗುಂಪಾಗಿ ಕುಳಿತಿರುವ ಜನಸ್ತೋಮದ ದೃಶ್ಯವು ಮೋನಳಿಗೆ ಕಾಣಿಸಿತು. ಆದರೆ ಅವರ ಬಾಯಿ ಮಾತ್ರ ತುಟಿಗಳಿಂದ ಹೊಲಿಯಲ್ಪಟ್ಟಿದೆ. ಮುಖದ ಮೇಲೆ ಕಳೆಯಿಲ್ಲ. ಚಿವುಟಿದರೆ ಮೈಯಲ್ಲಿ ಒಂದು ತೊಟ್ಟು ನೆತ್ತರವೂ ಬಾರದಷ್ಟು ಅವರು ಒಂದೆ ದಿನದಲ್ಲಿಯೆ ಒಣಗಿ ಹೋಗಿದ್ದಾರೆ. ಅಂದಿನ ಮಟ್ಟಿಗೆ ಕ್ಯಾಂಪಿನ ಬಂಧನಗಳು ಸಡಿಲುಮಾಡಲ್ಪಟ್ಟವು. ಕೈದಿಗಳು ಅಂದು ಕೆಲಸಕ್ಕಾಗಿ ಕಾರಖಾನೆ, ಹೊಲಗಳಿಗೆ ಹೋಗಬೇಕಿರಲಿಲ್ಲ. ನ್ಯಾರಿಯ ಸೂಚನೆಯ ಗಂಟೆಯು ಬಾರಿಸಿದಾಗ ಅದೆಷ್ಟೋ ಜನರು ಹಸಿವೆಯ ಪರಿವೆಯಿಲ್ಲದೆ ದಂಗುಬಡಿದವರಂತೆ ಕುಳಿತವರು ಸ್ಥಳವನ್ನು ಬಿಟ್ಟು ಕದಲಲಿಲ್ಲ. ಸೋಲು ಅವರ ಹಸಿವೆಯನ್ನು ಹಿಂಗಿಸಿತ್ತು.

ನವಂಬರ ತಿಂಗಳಿನ ದಿನವು. ನಿರಭ್ರವಾದ ಆಕಾಶ. ಸೂರ್ಯರಶ್ಮಿಯಿಂದ ತೊಳಗುವ ಸಮುದ್ರರಾಜ. ಹಸುಗಳು ಹೊಟ್ಟೆತುಂಬ ಮೇಯ್ದು ಮನಬಂದಂತೆ ಓಡಾಡುವವು. ಗುಡ್ಡದ ಮೇಲಿನ ಕುರಿಗಳೂ 'ಬ್ಯಾ' ಎನ್ನುತ್ತ, ಒಂದು ಕುರಿಯು ಹೊರಟರೆ ಅದರ ಹಿಂದಿಂದೆ ಹಿಂಡಿಗೆಹಿಂಡೆ ಸಾಗುತ್ತಿರುವದು. ಸೃಷ್ಟಿಯ ಕ್ರಮವು ಎಂದಿನಂತೆ ಬದಲಾಗದೆ ಸಾಗಿದೆ.

ಮೋನಳು ಕೊಟ್ಟಿಗೆಯಲ್ಲಿಯ ಕೆಲಸವನ್ನು ತೀರಿಸಿದಳು. ಹಾಲಿಗಾಗಿ ಜನರು ಬಂದಾಗ ಜರ್ರನೆ ಇಳಿದು ಹೋದ ಅವರ ಮುಖವನ್ನು ನೋಡುವದು ಅವಳಿಂದಾಗಲಿಲ್ಲ. ಮೊದಲನೆಯ ಕಂಪೌಂಡಿನ ಕೈದಿಗಳು ಗುಂಪಾಗಿ ಒತ್ತಟ್ಟಿಗೆ ಕುಳಿತುಕೊಂಡು ಬಾಯಿಬಿಚ್ಚಿ ಮಾತನಾಡಲಾರದೆ ನಿಟ್ಟುಸಿರಿಡುತ್ತ ಗೊಣಗುತ್ತಿದ್ದರು. ತಿನೆಯ ಕಂಪೌಂಡಿನೊಳಗಿನ ನಾವಿಕ ಕೈದಿಗಳ ಮೊದಲಿನ ಚಲ್ಲಾಟವು, ತುಂಟತನವು ಎಲ್ಲಿಯೋ ಮಾಯವಾಗಿ ತೆಪ್ಪಗಾಗಿದ್ದಾರೆ.

ತಾಸುಗಳ ಮೇಲೆ ತಾಸು ಕಳೆದವು. ಹತ್ತುವರೆ ಗಂಟೆಯಾದರೂ ಕ್ಯಾಂಪಿನ ವಾತಾವರಣವು ಚಲಿಸದೆ ಸ್ತಬ್ಧವಾಗಿತ್ತು. ಸುಂದಾದ

ಕ್ಯಾಂಪು ತುದಿ ಬೆರಳಿನ ಮೇಲೆ ನಿಂತಿತ್ತು. ಎಲ್ಲರ ದೃಷ್ಟಿಯೂ ಡೊಗ್ಲಾಸ ಪಟ್ಟಣದ ಕಡೆಗಿತ್ತು. ಅವರ ಮುಖಗಳು ಬಾಡಿ ಬತ್ತಿದ್ದುವು. ಕೈಕಾಲಿನ ನರಗಳೆಲ್ಲವೂ ಸತ್ತಿದ್ದುವು; ಹೌಹಾರಿ ಹೋಗಿದ್ದರು. ಅವರ ಜೀವನವೇ ಹಿಂಡಿ ಹಿಪ್ಪಿಯಾಗಿದ್ದಿತು. ನಿಂತುನಿಂತು ಬೇಸತ್ತ ಕುದುರೆಯು ಕಾಲಿನಿಂದ ನೆಲವನ್ನು ಕೆದರುವಂತೆ ಕೆಲವರು ಕಾಲುಬೆರಳಿನಿಂದ ನೆಲವನ್ನು ಕೆದರುತ್ತ ನಿಂತಿದ್ದರು. ಉಳಿದಾವ ಸದ್ದು ಕೇಳಬರುತ್ತಿದ್ದಿಲ್ಲ. ಓಸ್ಕಾರನ ಸುಳಿವೇ ಎಲ್ಲಿಯೂ ಹತ್ತಲಾರದಾಗಿದೆ. ಅವನೆಲ್ಲಿರಬಹುದು? ಏನು ಮಾಡುತ್ತಿರಬಹುದು? ಎಂಬ ವಿಚಾರವೆ ಮೋನಳ ಮನಸ್ಸನ್ನು ಆವರಿಸಿತ್ತಲ್ಲದೆ ಬೇರೆ ಯಾವುದರ ಚಿಂತೆಯೂ ಅವಳಿಗಿರಲಿಲ್ಲ.

ಬಹಳ ಹೊತ್ತಿನ ಮೇಲೆ ಕಡೆಗೊಮ್ಮೆ ಅಧಿಕಾರಿಗಳ ಭಾಗದಲ್ಲಿ ಚಟುವಟಿಕೆಗಾರಂಭವಾಯಿತು. ಒಕ್ಕಲುಮನೆಯ ತೀರ ಹತ್ತಿರದಲ್ಲಿದ್ದ ಕಮಾಂಡಂಟನ ಬಿಡಾರದಿಂದ ಟೆಲಿಫೋನದ ಗಂಟೆಯು ಒಂದೇಸವನೆ ಬಾರಿಸುತ್ತಿರುವದು ಮೋನಳಿಗೆ ಕೇಳಬಂದಿತು. ಶಾಂತವಾದ ವಾತಾವರಣವಿದ್ದುದರಿಂದ ಕಮಾಂಡಂಟನ ಧ್ವನಿಯು ಸ್ಪಷ್ಟವಾಗಿ ಕೇಳಬರುತ್ತಿತ್ತು.

'ಹೋಹೋ (Hello) ಯಾರವರು? ಸರಕಾರದ ಕಚೇರಿಯೇ?.. ಏನು? ಸಹಿಯಾಯಿತೇ? ಒಳಿತಾಯ್ತು' ಎಂಬ ಶಬ್ದಗಳು ಸ್ಪಷ್ಟವಾಗಿ ಮೋನಳಿಗೆ ಕೇಳಿಸಿದುವು.

ಅದೇ ಹೊತ್ತಿಗೆ ಸರಿಯಾಗಿ ಪೀಲ್ ಪಟ್ಟಣದ ಗಡಿಯಾರವು ಬಾರಿಸತೊಡಗಿತು. ಗಂಟೆಯ ಸಪ್ಪಳವು ನಿಂತಮೇಲೆ ತೋಫುಗಳ ಗರ್ಜನೆಯು ಕರ್ಣರಂಧ್ರವನ್ನು ಬಿರಿಯತೊಡಗಿತು. ಡೊಗ್ಲಾಸ ಪಟ್ಟಣದ ನಿಟ್ಟಿನಿಂದಲೇ ಸಪ್ಪಳವು ಬರುತ್ತಿತ್ತೆಂಬುದರಲ್ಲಿ ಯಾವ ಸಂಶಯವಿರಲಿಲ್ಲ. ವಾದ್ಯಘೋಷಗಳು ಕಿವಿಗಡಚಿಕ್ಕುವಂತೆ ಮೊಳಗಿದವು. ದೇವಾಲಯಗಳ ಘಣ್‌ಘಣ್ ಶಬ್ದವು ವಾತಾವರಣವನ್ನು ನಾದಮಯವನ್ನಾಗಿಸಿತು. ಪೀಲ್ ಪಟ್ಟಣದಲ್ಲಿ ಮುಂಜಾನೆಯಿಂದ ದಾರಿಕಾಯುತ್ತಿದ್ದ ಜನಸಮೂಹವು ಜಯಘೋಷಮಾಡುತ್ತಿರುವ ಕೂಗು ಎಲ್ಲ ಕಡೆಗೂ ಕೇಳಿಸಿತು.

ಎಲ್ಲಿ ನೋಡಿದರೂ ಜಯೋತ್ಸಾಹದ ಕುಣಿತದ ಸುಗ್ಗಿಯೋ ಸುಗ್ಗಿ ನಡೆಯಿತು. ಟೊಪ್ಪಿಗೆಗಳನ್ನು ತೂರುವರು; ಕೇಕೆ ಹಾಕುವರು. ಎಲ್ಲರ ಮುಖಗಳು ಅರಳಿ ನಗೆಯೂ, ಆನಂದವು ಹೊರಸೂಸುತ್ತಿತ್ತು. ಅವರ ಆನಂದಕ್ಕೆ ಪಾರವೇ ಇರಲಿಲ್ಲ. ಅವರನ್ನು ಹಿಡಿದವರೇ ಇಲ್ಲ. ಜಯ ಸಂಪಾದನೆಯ ಹೆಮ್ಮೆಯಲ್ಲಿ ಅತ್ತ ಆ ಜನಸಮೂಹವು ಮೈಮರೆತು ಆನಂದಪರವಶವಾಗಿದ್ದಿತು.

ಇತ್ತ ಕ್ಯಾಂಪಿನಲ್ಲಿಯ ಇಪ್ಪತ್ತೈದುಸಾವಿರ ಕೈದಿಗಳು ಉಸಿರು ಗಟ್ಟಿ, ಸಜೀವಪ್ರೇತಗಳಂತೆ ಸೆಟೆದು ನಿಂತಲ್ಲಿಯೇ ನಿಂತಿದ್ದಾರೆ. ಅವರ ವಿಪತ್ತು ಅವರ ಹರಣವನ್ನೇ ಹಾರಿಸಿದೆ. ಪಾಪ! ಪಿತೃಭೂಮಿಯೂ ಸೋತುಹೋಗಿತ್ತು. ಈ ಸಮಯದಲ್ಲಿ ಒಂದು ಚಿಕ್ಕ ಪ್ರಹಸನವೊಂದು ಅಲ್ಲಿ ಸಂಭವಿಸಿತು. ಮೊದಲನೆಯ ಕಂಪೌಂಡಿನ ಒಬ್ಬ ಸಿರಿವಂತ ಕೈದಿಯು ಸಾಕಿದ ಹೆಣ್ಣುನಾಯಿಯೊಂದು ಆ ಅಬ್ಬರಕ್ಕೆ ಹೆದರಿ, ತೆರಪಿಲ್ಲದೆ ಬೊಗಳುತ್ತ ಮನೆಯ ಚಪ್ಪರದ ಮೇಲೆ ಹುಚ್ಚಾಪಟ್ಟೆ ಜಿಗಿದಾಡಹತ್ತಿತು. ಅದರ ಸಿಟ್ಟಿನ ಕಸಿವಿಸಿಯನ್ನು ಕಂಡರೆ ಮೂಕಪ್ರಾಣಿಗೂ ಪಿತೃಭೂಮಿಯು ಬಿದ್ದುಹೋಯಿತೆಂಬ ತಿಳಿವಳಿಕೆಯು ಹುಟ್ಟಿತೇನೋ ಅನ್ನುವಂತೆ ಭಾಸವಾಗದೆ ಹೋಗಲಿಲ್ಲ ನಾಯಿಯ ಈ ಕಳವಳವನ್ನು ಅವರೆಲ್ಲರೂ ನಿರೀಕ್ಷಿಸಿದರು. ಅದು ಶಾಂತವಾಗಿ ಕೆಳಗೆ ಜಿಗಿಯಿತು. ಕೈದಿಗಳೆಲ್ಲರೂ ಹೊಟ್ಟೆ ಹುಣ್ಣಾಗುವಂತೆ ಬಿದ್ದು ಬಿದ್ದು ನಕ್ಕರು. ವಿಕಟಹಾಸ್ಯವಲ್ಲದೆ ಮತ್ತೇನು ?

ಕೆಲವೊಂದು ಕಾಲವು ಕಳೆದಮೇಲೆ ಮೊದಲನೆಯ ಕಂಪೌಂಡಿನ ಕೈದಿಗಳೆಲ್ಲರೂ ಸ್ಮೃತಿಯ ಮೇಲೆ ಬಂದರು. ಒಬ್ಬರಿಗೊಬ್ಬರು ಕೈಯಲ್ಲಿ ಕೈಹಾಕುತ್ತ—ಏನೇ ಆದರೂ ಯುದ್ಧವು ಒಮ್ಮೆ ಮುಗಿಯಿತು. ತಾವಿನ್ನು ಮೇಲೆ ಬಿಡುಗಡೆ ಹೊಂದುವೆವು—ಎಂಬ ಉಬ್ಬಿನಿಂದ ತುಸು ಹಿಗ್ಗಿದರು. ಈ ತುರಂಗದಿಂದ ಬಿಡುಗಡೆ ಹೊಂದಿ ತಮ್ಮ ತಮ್ಮ ಮನೆಗಳಿಗೆ—ಹೆಂಡಿರು-ಮಕ್ಕಳು ಮರಿಗಳಿಂದ ತುಂಬಿ ನಲಿದಾಡುವ ಮನೆಗಳಿಗೆ ಬೇಗನೆ ಹೋಗುವೆವೆಂಬ ಆಶೆಯಿಂದ ಉಲ್ಲಸಿತರಾದಂತೆ ಅವರ ಮುಖಭಾವನೆಗಳು ಒಡೆದುಕಾಣತೊಡಗಿದವು.

ಎರಡನೆಯ ಕಂಪೌಂಡಿನ ನಾವಿಕಕೈದಿಗಳೆಲ್ಲರು ನಗುತ್ತ, ಕೆಲೆಯುತ್ತ, ಒಳ್ಳೊಳ್ಳೆ ತಮಾಷೆಗಳನ್ನು ಮಾಡುತ್ತ ಕಾಲವನ್ನು ಕಳೆದರು. ಅವರಿಗೇನು ಪಿತೃಭೂಮಿಯು ಸೋತರೂ ಅಷ್ಟೇ–ಗೆದ್ದರೂ ಅಷ್ಟೇ. ಇಡೀ ಜಗತ್ತೆ ಅವರ ದೇಶ. ಉಪಜೀವನ ಭೂಮಿ ತಾಯಿ, ಸಮುದ್ರನೇ ಅವರ ನಿವಾಸಸಾಧನ. ಅಂದಮೇಲೆ ಪಿತೃಭೂಮಿಯ ಬಗ್ಗೆ ಅವರಿಗಿರುವ ಚಿಂತೆಯು ಅಷ್ಟಕ್ಕಷ್ಟೆ ಇತ್ತು.

ಮೋನಳು ಭಾವನಾಪರವಶಳಾಗಿ ಬಾಗಿಲದಲ್ಲಿ ಮೈಮರುಂಬಿದವರಂತೆ ನಿಂತುಕೊಂಡಿದ್ದಾಳೆ. ತಾನು ಈಸುದಿನಗಳಿಂದ ಬಯಸುತ್ತಿದ್ದ, ದೇವರಿಗೆ ಮೊರೆಯಿಡುತ್ತಿದ್ದ ಪ್ರಸಂಗವು ಕಡೆಗೊಮ್ಮೆ ಒದಗಿಬಂದಿತು. ಶಾಂತಿ! ಶಾಂತಿ! ಜಗತ್ತಿನ ತುಂಬೆಲ್ಲ ಶಾಂತಿ! ಈ ತರದ ಶಾಂತಿಯು ಪೃಥ್ವೀತಲದ ಮೇಲೆ ಹಿಂದೆಂದೂ ನೆಲಸಿರಲಿಲ್ಲ; ಮುಂದೆಯೂ ನೆಲಸುವ ಸಂಭವವಿಲ್ಲ. ಎದೆಬಿರಿಯುವಂಥ ಯುದ್ಧದ ಸುದ್ದಿಗಳು ಇನ್ನು ಕೇಳಿಸವು. ಭಯಂಕರ ದೃಶ್ಯವು ಇನ್ನು ಕಾಣಿಸದು. ಜಾತಿ ದ್ವೇಷ, ಜಾತಿಮತ್ಸರಗಳು ಇನ್ನು ತಲೆಯೆತ್ತಿ ಬಾಳಲಾರವು. ಆ. . . . ಮೋ. . . . ಲೆ. . . . ಆ. . . . ಮೋ. . . . ಲೆ. . . . ತಾನೂ . . . . ಓಸ್ಕಾರನೂ. . . . ಎಂಬ ವಿಚಾರದಲ್ಲಿ ಅವಳು ಮಗ್ನಳಾದಾಗ ಒಮ್ಮೆಲೆ ಅವಳ ಹಿಂದೆ ಅದಾರೋ ಬಂದು ನಿಂತಂತೆನಿಸಿತು. ಅವರಾರೆಂಬುದು ಮೋನಳಿಗೆ ಗೊತ್ತು. ಅವಳು ಮುಖವನ್ನು ತಿರುಗಿಸಲಿಲ್ಲ; ಮಾತನಾಡಲಿಲ್ಲ. ಅವನೂ ಸುಮ್ಮನಿದ್ದನು. ಕೆಲಹೊತ್ತು ಮೌನದ ಮಾಯೆಯು ಅವರಿಬ್ಬರನ್ನೂ ಮುಗ್ಧನಾದಿತ್ತು. ಮೋನಳಿಗೆ ಮಾತ್ರ ಇನ್ನು ಹೆಚ್ಚಿಗೆ ಹಾಗಿರುವದು ತಡೆಯುವದಾಗಲಿಲ್ಲ. ಅರ್ಧ ನಗುತ್ತ, ಅರ್ಧ ಅಳುವೊಗದಿಂದ ಅವಳು ಶಾಂತತೆಯನ್ನು ಭಂಗಗೊಳಿಸಿದಳು.

'ನೀನೂ ಬಿಡುಗಡೆ ಹೊಂದಿ ಬೇಗನೆ ನಿನ್ನ ಮನೆಗೆ ಹೋಗುವವನಲ್ಲವೇ ಓಸ್ಕಾರ್? ನಿನಗೆ ಆನಂದವಾಗಿಲ್ಲವೇ' ಎಂದು ಮೋನಳು ವಿಚಾರಿಸಿದಳು.

ಮತ್ತೆ ಶಾಂತತೆಯು ತಲೆದೋರಿತು. ಇಬ್ಬರೂ ಮೌನಿಗಳಾದರು.

ಅವನಿಂದ ಉತ್ತರ ಬರಬೇಕಿತ್ತು; ಬರಲಿಲ್ಲ. ೮-೧೦ ನಿಮಿಷಗಳ ನಂತರ ನಡುಗುತ್ತಿರುವ ಮೆಲ್ಲಗಿನ ದನಿಯಲ್ಲಿ ಓಸ್ಕಾರನು 'ಇಲ್ಲ, ಮೋನಾ. ನನಗೆ ಆನಂದವಾಗಿಲ್ಲೆಂಬ ಮಾತು ನಿನಗೆ ಗೊತ್ತಿದ್ದರೂ ಮತ್ತೇಕೆ ಕೆಣಕಿ ವಿಚಾರಿಸುತ್ತಿರುವಿ' ಎಂದು ಉತ್ತರಿಸಿದನು.

ಮೋನಳು ಏನೂ ತೋಚದಂತಾಗಿ ತನ್ನ ಕೈಯೊಂದನ್ನು ಬೆನ್ನು ಹಿಂದೆ ಇಟ್ಟುಕೊಂಡು ದೀರ್ಘವಿಚಾರದಲ್ಲಿರುವವರ ಮುದ್ರೆಯಿಂದ ನಿಂತಳು. ಆ ಕೈಯು ನಡುಗುವ ಮತ್ತೊಂದು ಕೈಯಲ್ಲಿ ಸಿಕ್ಕು ಬಿಟ್ಟಿದ್ದರೂ ಅವಳಿಗದರ ಪರಿವೆಯೇ ಇರಲಿಲ್ಲ.

---

## ಬಿಡುಗಡೆ

ಒಂದು ತಿಂಗಳು ಕಳೆದರೂ ಕ್ಯಾಂಪು ಮೊದಲಿನಂತೆಯೇ ಇದೆ. ಈ ಅವಧಿಯೊಳಗಾಗಿಯೇ ಕೈದಿಗಳು ಬಿಡುಗಡೆ ಹೊಂದುವರೆಂದು ಮೋನಳು ಕಲ್ಪಿಸಿದ್ದಳು. ಆದರೆ ಅವರನ್ನು ಬಿಡುಗಡೆ ಮಾಡಲು ಇನ್ನೂ ಅಪ್ಪಣೆಯು ಬಂದಿರಲಿಲ್ಲ; ಅದಕ್ಕಾಗಿ ದಾರಿ ಕಾಯಬೇಕಾಗಿದ್ದಿತು.

ಕ್ಯಾಂಪಿನ ಕಟ್ಟಳೆಗಳು ತೀರ ಸಡಿಲಾಗಿವೆ. ಕೈದಿಗಳು ಇಂಥಲ್ಲಿಯೇ ತಿರುಗಾಡಬೇಕೆಂಬ ನಿಯಮವು ತೆಗೆದುಹಾಕಲ್ಪಟ್ಟಿದೆ. ಮಹಾದ್ವಾರದ ಹೊರತಾಗಿ ಬೇಕಾದಲ್ಲಿಗೆ ಹೋಗಿಬರಲು ಅಪ್ಪಣೆಯು ದೊರೆತಿತ್ತು. ಯಾಕಂದರೆ ಅವರಾರೂ ಈಗ ಓಡಿ ಹೋಗುವ ಪ್ರಯತ್ನಮಾಡರು. ಕೆಲವು ದಿನಗಳಲ್ಲಿ ಮುಕ್ತತೆಯಾಗುವದೆಂದು ಅವರಿಗೆ ತಿಳಿದುಬಿಟ್ಟಿತ್ತು.

ಈಗ ಮೋನಳಿಗೆ ಸಹಾಯಕ್ಕೇನು ಕಡಮೆಯಿಲ್ಲ. ಕೈದಿಗಳು ಬೇಕಾದ ನೆರವನ್ನು ತಾವಾಗಿಯೇ ಕೊಡುತ್ತಿರುವರು. ಅವರು ತಮ್ಮ ತಮ್ಮ ಹೆಂಡಿರುಮಕ್ಕಳ ಫೋಟೋಗಳನ್ನು ತೋರಿಸುವರು. ತಾವಲ್ಲಿಂದ ಹೊರಡುವಾಗ ತಮ್ಮ ಪಾಲಿಗೆ ಎಷ್ಟೆಷ್ಟು ಹಣ ಬರಬಹುದೆಂದು ಅವಳ ಕಡೆಯಿಂದ ಲೆಕ್ಕಮಾಡಿಸುತ್ತಿದ್ದರು.

ಕಡೆಗೆ ಶಾಂತಿಯು ಪರಿಷತ್ತು ನೆರೆದು, ಕೈದಿಗಳ ಬಿಡುಗಡೆ ಮಾಡ

ಬೇಕೆಂದು ನಿರ್ಧರಿಸಿದರು. ಹಾಗೆ ಕಮಾಂಡಂಟನಿಗೆ ಆಜ್ಞೆಯೂ ಬಂದಿತು. ಪ್ರತಿದಿನವೂ ೩೫೦ ಜನರಂತೆ ಅಟ್ಟಿಹಾಕಬೇಕೆಂದು ಗೊತ್ತುಮಾಡ ಲಾಗಿತ್ತು. ಮುಕ್ತತೆಯ ಬಗ್ಗೆ ಯಾವ ಕರಾರುಗಳೂ ಇರಲಿಲ್ಲ.

ದೂರದಲ್ಲಿ ಮೂವರು ಕೈದಿಗಳು ತಮ್ಮ ಬಿಡಾರದ ಹೊರಗೆ ಕುಳಿತು ಗ್ರ್ಯಾಮ್ಯ ಇಂಗ್ಲಿಷಿನಲ್ಲಿ ಮಾತನಾಡುವುದು ಮೋನಳ ಕಿವಿಗೆ ಹೇಗೋ ಬಿದ್ದಿತು. ಆ ಜನರು ಇಂಗ್ಲಿಷ ಭಾಷೆಯನ್ನಲ್ಲದೆ—ಆಯಾ ಭಾಗದ ರೂಢ ಭಾಷೆಯಲ್ಲಿ ಮಾತನಾಡಬಲ್ಲರೆಂಬುದನ್ನರಿತು ಅವಳಿಗೆ ಆಶ್ಚರ್ಯವೆನಿಸಿತು.

'ಅವರು ನನಗೆ ಜರ್ಮನ್ ಎಂದು ಕರೆಯುತ್ತಾರೆ. ನಾನು ಔಧ್ಯಾನಕ್ಕೆ ಬಂದಾಗ ಐದು ವರುಷಗಳಾಗಿದ್ದುವು. ಈಗ ನನಗೆ ೫೦. ಆದುದರಿಂದ ಐದು ವರುಷ ಜರ್ಮನ್—೪೫ ವರುಷ ಇಂಗ್ಲಿಷ್—ಹೀಗಿದ್ದರೂ ನನ್ನನ್ನು ಜರ್ಮನಿಗೆ ಅಟ್ಟಬೇಕೆಂದಿದ್ದಾರೆ' ಎಂದು ಒಬ್ಬನು ಹೇಳುತ್ತಿದ್ದನು.

'ನನಗೆ ಯುದ್ಧದ ಸಂಬಂಧವೇ ಇಲ್ಲ. ಅದಕ್ಕಾಗಿ ಎಂದೂ ಹೆಮ್ಮೆ ಪಟ್ಟವನಲ್ಲ. ಇನ್ನೂ ಕಂಕುಳ ಕೂಸಿರುವಾಗ ಗ್ಲಾಸಗೋ ಪಟ್ಟಣಕ್ಕೆ ಬಂದೆನಂತೆ. ಅಲ್ಲಿಯೇ ಬೆಳೆದು ದೊಡ್ಡವನಾದೆ. ನನ್ನ ಮದುವೆಯು ಅಲ್ಲಿಯೇ ಆಯಿತು. ಇಬ್ಬರು ಗಂಡುಮಕ್ಕಳಿದ್ದರು. ಆ ನನ್ನ ಮಕ್ಕಳಿಬ್ಬರೂ ಬ್ರಿಟಿಶ್ ಸೈನ್ಯದಲ್ಲಿ ಸೇರಿಕೊಂಡೇ ಯುದ್ಧದಲ್ಲಿ ಪ್ರಾಣ ವನ್ನರ್ಪಿಸಿದ್ದಾರೆ. ಈ ಸುದ್ದಿಯು ನನ್ನ ಹೆಂಡತಿಗೆ ಮುಟ್ಟಿತು. ಅವಳು ಎದೆಯೊಡೆದು ತೀರಿಹೋದಳೆಂಬ ಸುದ್ದಿ ನನಗೆ ಬಂದಿದೆ. ನನ್ನವರೆಂಬವರು ಯಾರೂ ಉಳಿಯಲಿಲ್ಲ. ಅವರೂ ನನ್ನನ್ನು ಪರದೇಶಕ್ಕೆ (ಜರ್ಮನಿಗೆ) ಕಳಿಸಬೇಕೆಂದು ಮಾಡಿದ್ದಾರೆ' ಎಂದು ಮತ್ತೊಬ್ಬನು ತನ್ನ ಕತೆಯನ್ನು ಹೇಳಿದನು.

'ನಿಮ್ಮಿಬ್ಬರಿಗಿಂತಲೂ ನನ್ನದು ತೀರ ವಿಚಿತ್ರವಿದೆ. ಹೀನವೂ ಇದೆ. ನನ್ನ ತಂದೆ ಜರ್ಮನ್ನನು. ಇದು ನಿಜವಿದ್ದರೂ ನಾನು ಜನ್ಮದಾರಭ್ಯ ಇಲ್ಲಿಯೇ ಇದ್ದೇನೆ. ಇದೂ ಅಲ್ಲದೆ ನನಗೊಬ್ಬ ಮಗನಾದನು. ಸುಂದರ

ತರುಣನಾಗಿ ಅವನು ಬೆಳೆದನು. ರಾಜಾಜ್ಞೆಯಂತೆ ಬ್ರಿಟಿಶ್ ಸೈನ್ಯದಲ್ಲಿ ಸೇರಿಕೊಂಡನು. ಒಂದು ವರುಷದ ಹಿಂದೆ ಗುಂಡುಬಡಿದು ಕೆಲಸ ಮಾಡಲು ಅಯೋಗ್ಯನಾದನು. ಕೈದಿಗಳನ್ನು ಅದರಲ್ಲಿಯೂ ಪ್ರತ್ಯಕ್ಷ ತಂದೆಯನ್ನು ಕಾಯುವದಕ್ಕಾಗಿ ಅವನೀಗ ನಿಯಮಿಸಲ್ಪಟ್ಟು ಇಲ್ಲಿ ಬಂದಿದ್ದಾನೆ. ಎಷ್ಟು ವಿಚಿತ್ರವಿದೆ ನೋಡಿರಿ! ನನ್ನ ಮಗನು ಮುಳ್ಳುತಂತಿಯ ಬೇಲಿಯ ಹೊರಗೆ-ಸ್ವತಂತ್ರನು. ನಾನೋ ಒಳಗೆ ಬಂಧಿತನು. ಅವನೆ ನನ್ನನ್ನು ಹೊರಗಟ್ಟಲು ನನ್ನ ರಕ್ಷಕನಾಗಿ ಒರತಕ್ಕವನು. ನಾನು ಜರ್ಮನಿಗೆ ಹೋಗಬೇಕಂತೆ! ಇದೊಬ್ಬ ಮಗನು ಇಲ್ಲಿ! ಅಲ್ಲಿ ನನ್ನವರೆಂಬವರು ಯಾರಿದ್ದಾರೆ? ಏನಿದೆ? ಹೇಗೆ ಹೋಗಬೇಕು? ಎಂಥ ನ್ಯಾಯ ವಿದು' ಎಂದು ಅಸ್ಪಷ್ಟ ಇಂಗ್ಲಿಷ್ ಉಚ್ಚಾರಗಳಿಂದ ತನ್ನ ಇತಿಹಾಸವನ್ನು ವಿವರಿಸಿದನು.

ಈ ಸಂಭಾಷಣವನ್ನು ಕೇಳಿ ಮೋನಳ ಎದೆಯೊಡೆದು ನೀರಾಯಿತು. ಪ್ರತ್ಯಕ್ಷ ಯುದ್ಧದಲ್ಲಿ ಇಂಥ ಭೀಕರ ಸುದ್ದಿಗಳು ಜರುಗಿರಲಾರವೆಂದು ಆವಳು ಭಾವಿಸಿದಳು. ಇದೆಂಥ ಅನ್ಯಾಯವು! ದೇವರಿಗೆ ಅಣಗಿಸಿದಂತೆಯಲ್ಲವೇ ಇದು? ಜಾತಿ! ಜಾತಿ! ಜಾತಿ! ದೇವರೇ, ಈ ಕ್ರಿಶ್ಚಿಯನ್ ಜನರು ಈ ತೆರದ ಮಾತುಗಳನಾಡದಂತೆ ಮಾಡೆಂದು ಬಿಸುಸುಯ್ದಳು. ಆದರೆ ಆ ಸಂಭಾಷಣ ಕೇಳಿ ಅವಳು ದಿಗಿಲುಗೊಂಡಳು. ಜರ್ಮನ್ನರಿಂದ ಇಲ್ಲಿಯೇ ಹುಟ್ಟಿದವರೆಲ್ಲರೂ ಜರ್ಮನ್ನಿಗೆ ಕಳಿಸಲ್ಪಡುತ್ತಾರೆಂದ ಮೇಲೆ ಓಸ್ಕಾರನಂತೂ ಹೋಗಲೇಬೇಕಾಗುವದು. ರಾತ್ರಿಯಲ್ಲಿ ಓಸ್ಕಾರನು ಬಂದು ಬಾಗಿಲ ತಟ್ಟಿದನು. ಬಾಗಿಲವು ಕೂಡಲೆ ತೆರೆಯಿತು. ಅವನ ಕಣ್ಣು ಕೆಂಪಗಾಗಿದ್ದವು; ತುಟಿಗಳು ನಡುಗುತ್ತಿದ್ದವು.

'ಹೊಸದಾಗಿ ಹೊರಟ ಆಜ್ಞೆಯನ್ನು ಕೇಳಿದಿಯಾ?'

'ಹೌದು ಕೇಳಿದ್ದೇನೆ. ನೀನೂ ನಿನ್ನ ದೇಶಕ್ಕೆ ತೆರಳಲೇಬೇಕಾಗಿದೆಯಲ್ಲವೇ?'

'ಹೌದು, ಅದರಲ್ಲೇನು ಸಂಶಯ? ನಾನು ಹೋಗಲೇಬೇಕು.'

ಮೊಟ್ಟಮೊದಲು ಕಳಿಸಲ್ಪಡತಕ್ಕವರು ಮೊದಲನೆಯ ಕಂಪೌಂಡಿನ

ಶ್ರೀಮಂತರ ಗುಂಪು. ಅಂಥವರಿಗೆ ಎಲ್ಲಿದ್ದರೇನು ತೊಂದರೆಯುಂಟಾಗದು. ಪಾರ್ಕಲೇನ್ ಅಥವಾ ಥೀಅರ್‌ಗಾರ್ಟನ್–ಅವರಿಗೆ ಯಾವ ಸ್ಥಳವಾದರೇನು? ಕಪ್ಪನ್ನ ರೇಶಿಮೆಯ ಅಂಗಗಳನ್ನು ಧರಿಸಿಕೊಂಡು ಸಾಮಾನಿನೊಂದಿಗೆ ಅವರು ಆನಂದದಿಂದ ದಾರಿಯನ್ನು ಹಿಡಿಯುತ್ತಕ್ಕವರು. ಕ್ರಮವಾಗಿ ಹೊರಟೂಹೋದರು.

ಆಮೇಲೆ ಎರಡನೆಯ ಕಂಪೌಂಡಿನವರು. ಇವರ ಚಿತ್ರವೇ ಬೇರೆ. ಧರಿಸಲು ಗಟ್ಟಿಯಾದ ಬಟ್ಟೆಬರೆಗಳಿಲ್ಲ. ಮೇಲಂಗಿಯಂತೂ ಅವರು ಕಂಡರಿಯರು. ಕ್ಯಾಂಪ ಬ್ಯಾಂಕಿನಲ್ಲಿ ಸಂಗ್ರಹವಾದ ಹಣದ ಹೊರತು ಅವರ ಹತ್ತಿರವೇನೂ ಇಲ್ಲ. ಕೈಯಲ್ಲಿ ಒಂದು ಕ್ಯಾನ್‌ವ್ಹಾಸ್ ಚೀಲ. ಅವರ ಸಾಮಾನುಗಳೆಲ್ಲ ಅದರಲ್ಲಿ. ಇಷ್ಟಾದರೆ ಅವರ ಸಿದ್ಧತೆಯಾಯಿತು.

ಜನವರಿ ತಿಂಗಳಿನ ಮುಂಜಾವು. ಮಳೆಯು ಚಿಟಿಚಿಟಿಯಾಗಿ ಉದುರುತ್ತಿದೆ. ಮೋಡಗಳು ಕಪ್ಪನ್ನಗೌನಣಿಗೆ ತೊಟ್ಟು ಕೆಳಗಿಳಿಯುತ್ತಿವೆ. ಆಜ್ಞೆಯ ಕರ್ಕಶಧ್ವನಿಯು ಕೇಳಿಸಿದೊಡನೆ ಕೈದಿಗಳು ನಡೆಯುತ್ತ ಮಹಾದ್ವಾರದ ಕಡೆಗೆ ಸಾಗಿದರು. ನಾಲ್ಕುವರುಷಗಳ ಹಿಂದೆ ಈ ತಂಡವು ಬಂದಾಗಿನ ರೀತಿಯೇ ಬೇರೆ ಇತ್ತು. ಮಾತುಕಥೆಗಳಿಲ್ಲ. ನಗೆಚೇಷ್ಟೆಯಿಲ್ಲ. ಬಾಯಿ ಹೊಲಿದಂತಿದೆ. ಮುಖಗಳ ಮೇಲೆ ಕಳೆಯಿಲ್ಲ. ಕಣ್ಣಲ್ಲಿ ಮಾತ್ರ ಜೀವವಿದೆ.

'ಡೊಗ್ಲಾಸಪಟ್ಟಣದಿಂದ ಅವರೆಲ್ಲರೂ ಬಂದರಕ್ಕೆ ವಧಸ್ತಂಭಕ್ಕೆ ಒಯ್ಯಲ್ಪಡುವ ಮನುಷ್ಯರಂತೆ ತಲೆಯನ್ನು ಕೆಳಗೆ ಹಾಕಿ, ಬಲಿಗೊಡಲು ಸಾಗಿಸುವ ಕುರಿಗಳ ಹಿಂಡಿನಂತೆ ಒಬ್ಬರ ಹಿಂದೊಬ್ಬರು ಸಾಗಿದ್ದರು. ಪ್ರವಾಸಿಕರು ಕೇಬಿನ್‌ದಲ್ಲಿ. ಇವರನ್ನು ಮಾತ್ರ ತೀರ ಕೆಳತರಗತಿಯ ಹೊಲಸು ನಾರುವ ಸ್ಥಳದಲ್ಲಿ ಪಶುಗಳನ್ನು ತುಂಬಿದಂತೆ ತುಂಬಲಾಯಿತು. ಹಡಗು ಬಂದರವನ್ನು ಬಿಟ್ಟು ಮುಂದೆ ಸಾಗಿದಾಗ ಅವರ ಕಣ್ಣುಗಳು ತಾವು ಇಷ್ಟು ದಿನವಿದ್ದು, ಈಗ ಅಗಲಿಹೋಗುವ ನಾಕಾಲೋಯಾದ ಕಡೆಗೇ ಇದ್ದವು. ಪಾಪ! ಈ ಕ್ಯಾಂಪು ಒಂದು ನರಕವೆಂದು ಅವರು ಮಾತಾಡುವದನ್ನು ಬಿಟ್ಟಿರಲಿಲ್ಲ. ಆದರೂ ಆರು ತಿಂಗಳಿ

ನಲ್ಲಿಯೋ, ಹೊಟ್ಟೆಗಿಲ್ಲದೆ ಸಂಕಟಪಡುತ್ತ ತಿರುಗಿ ಈ ನರಕಕ್ಕೆ ಬರಬೇಕೆಂಬಿಚ್ಛೆ ಅವರಿಗಾಗಿದ್ದರೂ ಆಗಿರಬಹುದು.' ಎಂದು ಮೊದಲಾದ ಸುದ್ದಿಯನ್ನು ಅಲ್ಲಿಂದ ಮರಳಿ ಬಂದ ಕ್ಯಾಪ್ಟನ್ನನು ಮೋನಳಿಗೆ ಹೇಳಿದನು.

'ಆದರೆ....ಅವರೆಲ್ಲರನ್ನೂ....ಜರ್ಮನಿಗೇಕೆ ಕಳಿಸಿದರು?' ಎಂದು ಪ್ರಶ್ನೆಮಾಡಿದಳು.

'ಹಾಗೆ ಶಾಂತಿಪರಿಷತ್ತಿನ ಆಜ್ಞೆಯಾಗಿದೆ. ಯಾವ ದೇಶದವರೂ ವೈರಿಗಳನ್ನಿರಿಸಿಕೊಳ್ಳಲು ಇನ್ನು ಮೇಲೆ ಬಯಸವು. ಅವರು ಒಳ್ಳೇ ಸ್ನೇಹಿತರಾಗಿ ಬಂದು ನೆಲಿಸುವ ಇಚ್ಛೆಯಾಗುವವರೆಗೆ ಕೆಲವರಿಗಾದರೂ ಆಶ್ರಯವನ್ನೀಯುವದು ಅಹಿತವೆಂದು ಎಲ್ಲ ದೇಶದವರ ಅಭಿಪ್ರಾಯವಾಗಿದೆ.'

'ಒಂದು ವೇಳೆ ಇಂಥ ಇಚ್ಛೆಯುಳ್ಳವರು ಇದ್ದರೆ..ಇಂಗ್ಲಿಷ ಹೆಂಡತಿಯಿದ್ದಂಥ ಒಬ್ಬ ಜರ್ಮನ್ನನು ಬ್ರಿಟಿಶ್ ಉದ್ಯಾನವನ್ನು ಕೈಕೊಂಡಿದ್ದರೆ..ಅಂಥವನನ್ನು ಇಲ್ಲಿಯೇ ಇರಿಸಿಕೊಳ್ಳಲು ಒಪ್ಪುವದಿಲ್ಲವೆ?'

'ಒಪ್ಪಬಹುದೆಂದು ನಾನು ಭಾವಿಸಿದ್ದೇನೆ. ಆದರೆ ಖಂಡಿತವಾಗಿ ಹೇಳಲಾರೆ' ಎಂದು ಕ್ಯಾಪ್ಟನ್ನನು ತನ್ನ ಅಭಿಪ್ರಾಯವನ್ನು ತಿಳಿಸಿದನು.

ಮೋನಳು ಹೊಸ ಹೊಸ ವಿಚಾರಗಳ ಸುಳಿಯಲ್ಲಿ ಸಿಕ್ಕಳು. ಓಸ್ಕಾರನು ಜರ್ಮನಿಗೆ ಹೋಗಲು ಬಯಸದಿದ್ದರೆ, ಅವನೇಕೆ ಇಲ್ಲಿದ್ದುಕೊಂಡು ಈ ನಾಕಾಲೋಯ್ ಭೂಮಿಯನ್ನು ಸಾಗಿಸಬಾರದು? ಎಂದು ಮೊದಲಾಗಿ ಮನಸಿನಲ್ಲಿ ಮಂಡಿಗೆಯನ್ನು ಮಾಡುತ್ತಿದ್ದಳು.

ಮರುದಿನ ಮುಂಜಾವಿನಲ್ಲಿ ಮೂರನೆಯ ತಂಡವು ಸಾಗಿದ ಮೇಲೆ ಅವಳು ಹೊಲದ ಯಜಮಾನನ ಮನೆಯ ದಾರಿಯನ್ನು ಹಿಡಿದು ಹೊರಟಿದ್ದಳು—ಅರ್ಧ ವರುಷದ ಲಾವಣಿ ಹಣ ಮುಟ್ಟಿಸುವದಕ್ಕೆಂದು. ನವಂಬರಕ್ಕೆ ಲಾವಣಿಯ ಅವಧಿಯು ಮುಗಿಯುವದಿತ್ತು. ಅದಕ್ಕಾಗಿ ಸಾಗಿದ್ದಳವಳು.

ಆಲ್ಹಾದಕರವಾದ ಮುಂಜಾವು. ನೀಲಿ ಬಣ್ಣದ ಆಕಾಶ. ಸ್ಪಷ್ಟವಾದ ಸೂರ್ಯನ ಬೆಳಕು. ಹಿಮದ ಕಣಗಳು ಬೀಳಬೇಕೆಂದು ಇಣಕು

ತಿದ್ದವು. ಹಳದಿ ಬಣ್ಣದ ಹುಲ್ಲು ಆಗ ತಾನೆ ತಲೆಯೆತ್ತಲಿತ್ತು. ಜೀಸಾದ ಹೆಜ್ಜೆಗಳನ್ನಿಕ್ಕುತ್ತ ಮೋನಳು ದಾರಿಯ ಒಂದು ಬದಿಯಿಂದ ನಡೆಯು ತ್ತಿದ್ದಳು. ನಾಲ್ಕು ಪುರುಷಗಳ ಹಿಂದೆ ಹೊಲದ ಯಜಮಾನನು ತನ್ನ ತಂದೆಗಾಡಿದ ಮಾತುಗಳು ಅವಳಿಗೆ ನೆನಪಾಗಿದ್ದವು. ತಾನಾಡಿದಂತೆ ಯಜಮಾನನು ನಡೆದುಕೊಳ್ಳುವನೋ ಇಲ್ಲವೋ ಎಂಬ ಸಂಶಯವು ಅವಳಿಗುಂಟಾಗಿತ್ತು.

ಯಜಮಾನನ ದರ್ಶನವು ಅವನ ಮನೆಯ ಬಾಗಿಲದಲ್ಲಿಯೇ ಆಯಿತು. ಅವನು ಬೆಂಚ್‌ಮ್ಯಾಜಿಸ್ಟ್ರೇಟನಾಗಿ ನಿಯಮಿಸಲ್ಪಟ್ಟಿದ್ದರಿಂದ ಆ ಕೆಲಸವನ್ನು ತೀರಿಸಿಕೊಂಡು ಪೇಟಾ ಪಟ್ಟಣದಿಂದ ಆದೇ ಬಂದಿದ್ದನು. ದೇವಾಲಯಕ್ಕೆ ಹೋಗುವ ಹೊತ್ತಾಗಿದ್ದರಿಂದ ಆ ಉಡುಪನ್ನು ಧರಿಸಿ ಕೊಂಡು ಹೊರಟಿದ್ದನು.

'ಲಾವಣಿ ಹಣವನ್ನು ತಂದಂತೆ ಕಾಣುತ್ತದೆ' ಎಂದು, ತಾನು ಕುಳಿತುಕೊಳ್ಳುವ ಕೋಣೆಯಲ್ಲಿ ಅವಳನ್ನು ಕರೆದೊಯ್ದನು.

ಅವಳು ನೋಟುಗಳನ್ನು ಎಣಿಸಿ ಮೇಜಿನ ಮೇಲಿರಿಸಿದಳು. ಹಣ ತೆಗೆದುಕೊಂಡು ಪಾವತಿ ಬರೆದುಕೊಟ್ಟನು. ಹೊರಗೆ ಹೋಗಬೇಕಾದ್ದ ರಿಂದ ಕೂಡಲೆ ಎದ್ದುನಿಂತನು. ಅವಳೊಡನೆ ಹೆಚ್ಚು ಹೊತ್ತು ಕಳೆಯುವ ಮನಸೂ ಅವನಿಗಿರಲಿಲ್ಲ. ಮೋನಳು ಮಾತ್ರ ಕುಳಿತ ಸ್ಥಳದಿಂದ ಕದಲಲಿಲ್ಲ.

'ರಾಯರೇ, ಮುಂದಿನ ಲಾವಣಿ ವಿಚಾರವೇನು?'

'ಆ ಮಾತು ಇಂದು ಬೇಡ.'

'ನನಗೆ ಕೆಲವು ಮಹತ್ವವಾದ ವ್ಯವಸ್ಥೆ ಮಾಡಿಕೊಳ್ಳಬೇಕಾಗಿದೆ. ಆದ್ದರಿಂದ ಈಗ ಈ ಮಾತು ಗೊತ್ತುಮಾಡಿದರೆ ಉಪಕಾರವಾಗುವದು. ರಾಯರೇ, ಮುಂದೆ ಈ ಲಾವಣಿ ಮಾತು ಬಂದಾಗ ಎಲ್ಲವೂ ಸುಸೂತ್ರ ವಾಗಿ ಜರುಗುವದೆಂದು ತಾವು ವಚನವಿತ್ತರೆ, ಆ ಮಾತನ್ನು ಈಗ ಬಿಟ್ಟು ಬಿಡಬಹುದು' ಎಂದು ಮೋನಳು ವಿಚಾರಿಸಿದಳು.

ಯಜಮಾನನು ಅಷ್ಟರಲ್ಲಿ ಬಾಗಿಲದವರೆಗೆ ಹೋಗಿದ್ದನು. ಬಾಗಿಲ ವನ್ನು ಒಂದು ಕೈಯಿಂದ ಹಿಡಿದುಕೊಂಡು ನಿಂತು ಸ್ಪಷ್ಟವಾಗಿ

'ನಿಜವಾಗಿಯೇ ನಿನಗೆ ಹೇಳುವದೆಂದರೆ ನನ್ನ ಮನಸಿನಲ್ಲಿ ಬೇರೆಯೇ ವ್ಯವಸ್ಥೆಮಾಡಬೇಕೆಂದಿದೆ' ಎಂದು ಮಾತನಾಡಿದನು.

ಇದನ್ನು ಕೇಳಿ ಮೋನಳಿಗೆ ಸಿಡಿಲುಬಡಿದಂತಾಯಿತು. ನಿರಾಶೆಯಾಯಿತು; ಆಶ್ಚರ್ಯವಾಯಿತು. ನಿರುತ್ಸಾಹದಿಂದ ಕುಳಿತ ಸ್ಥಳವನ್ನು ಬಿಟ್ಟಿದ್ದಳು. ಇಬ್ಬರೂ ಹಾಗೆಯೇ ಮಾತಾಡುತ್ತ ಮುಂದೆ ಸಾಗಿದರು.

'ಅದನ್ನು ನನ್ನ ಕೊರಳಿಗೇ ಕಟ್ಟಬೇಕೆಂದು ನೀವು ಇಚ್ಛೆಪಡುವದಿಲ್ಲವೆ? ನನಗೇ ಲಾವಣಿಗಾಗಿ ಮುಂದುವರಿಸುವದಿಲ್ಲವೇ?'

'ನಾನೇನು ಹಾಗೆ ಮಾಡುವವನಲ್ಲ. ಅದು ನನ್ನದು. ನನ್ನ ಮನಸಿಗೆ ಬಂದಂತೆ ಮಾಡಬೇಕೆಂದಿರುವೆನು.'

'ನನ್ನ ತಂದೆಗೆ ನೀವು ರಾಮವಚನವನ್ನು ಕೊಟ್ಟಿದ್ದಿರಲ್ಲವೆ? ಆ ಮಾತು ಮರೆತಿಲ್ಲೆಂದು ಭಾವಿಸಿದ್ದೇನೆ.'

'ಆಗಿನದಕ್ಕೂ ಈಗಿನದಕ್ಕೂ ಸಂಬಂಧವೇ ಇಲ್ಲ. ಪ್ರಸಂಗಗಳು ಬದಲಾಯಿಸುವವು. ನಿನ್ನ ತಂದೆ, ಅಣ್ಣ ತೀರಿಕೊಂಡಿದ್ದಾರೆ.....'

'ಆದರೆ ಅವನ ಮಗಳು ಜೀವದಿಂದಿದ್ದಾಳೆ. ಅವಳೇನು ಮಾಡಿದ್ದಾಳೆ....ಅವಳಿಗೇಕೆ....ಕೊಡಬಾರದು?'

'ಅವಳಿಗೂ ಗೊತ್ತಿದೆ ಅವಳೇನು ಮಾಡಿದ್ದಾಳೆಂಬುದು. ಆ ಬಗ್ಗೆ ನನ್ನನ್ನು ವಿಚಾರಿಸದಿರುವದೊಳಿತು.'

'ರಾಯರೇ, ಅದಾವುದು ನನಗೆ ಹೊಳೆಯದು. ಅದನ್ನು ನೀವು ನನಗೆ ಹೇಳಲೇಬೇಕು. ದಯವಿಟ್ಟು ಹೇಳಬೇಕು.'

'ಹಾಗಿದ್ದರೆ ಕೇಳು. ಭೂಮಿಯನ್ನು ಸಾಗುವಳಿಮಾಡಲು ನನ್ನ ಜಾತಿಯವರೇ ಬೇಕಾಗಿದ್ದಾರೆ; ಬೇರೆ ಜಾತಿಯವರು ನನಗೆ ಸರ್ವಥಾ ಬೇಕಾಗಿಲ್ಲ.'

ಮೋನಳಿಗೆ ತಡೆಯಲಾರದಷ್ಟು ಸಿಟ್ಟು ಬಂದುದರಿಂದ ಮಾತನಾಡಲು ಬಾಯಿಬರಲಿಲ್ಲ. ಅಲ್ಲಿ ನಿಲ್ಲದೆ, ದಾರಿಯನ್ನು ಹಿಡಿದು, ಬಿಕ್ಕಿಬಿಕ್ಕಿಸಿ ಅಳುತ್ತ ಮನೆಯ ಕಡೆಗೆ ಸಾಗಿದಳು. ಅತ್ತ ಓಸ್ಕಾರನು ಆಕಸ್ಮಾತ್ತಾಗಿ ಅದೇ ದಾರಿಯಿಂದ ಹೊರಟಿದ್ದನು. ಅವಳ ಈ ದೆಶೆಯನ್ನು

ನೋಡಿ ಮಾತನಾಡಿಸದಿರುವದು ಅಯುಕ್ತವೆಂದು ಭಾವಿಸಿ ಅವಳನ್ನು ವಿಚಾರಿಸಿದನು. ಅಲ್ಲಿ ಸಂಭವಿಸಿದ ಸಂಗತಿಯನ್ನು ಹೇಳಿದಳು. ಮನಸ್ಸಿಗೆ ಹತ್ತುವಂಥ ಮಾತುಗಳಾಡಿದುದನ್ನು ಮಾತ್ರ ಬಿಡೆಯಲಿಲ್ಲ.

'ನಿಮ್ಮ ಮನೆತನದವರು ತಲೆ-ತಲಾಂತರಗಳಿಂದ ಈ ನಾಕಾಲೋಯ್‌ದಲ್ಲಿರುತ್ತ ಬಂದಿಲ್ಲವೇ' ಎಂದು ವಿಚಾರಿಸಿದನು.

'ನಾಲ್ಕು ತಲೆಗಳಿಂದ ಇಲ್ಲಿಯೇ ಇದ್ದೇವೆ.'

'ಈಗ ಇದನ್ನು ನಿನ್ನಿಂದ ಬಿಡಿಸಿ ಇನ್ನೊಬ್ಬರಿಗೆ ಕೊಡುವದೆಂದರೆ ಅಪಮಾನಗೊಳಿಸಿದಂತೆಯೆ ಸರಿ' ಎಂದು ಅವನು ಉದ್ಗಾರತೆಗೆದನು.

ಮೋನಳಿಗೆ ಕುಕ್ಕುರು ಬಡಿದಂತಾಯಿತು. ನಾಕಾಲೋಯ್‌ದ ಋಣವು ಅಂದಿಗೆ ತೀರಿತು. ಶಾಂತಿ! ದೊರೆಯಲೆಂದೇ ದೇವರಿಗೆ ಮೊರೆಯಿಟ್ಟಿದ್ದಳು. ಬೇಡಬಯಸುತ್ತಿದ್ದುದು ಅನಾಯಾಸವಾಗಿ ಒದಗಿ ಬಂದಿತು.

ದಿನಗಳೆದಂತೆ ಪ್ರತಿದಿನವೂ ಹೊಸ ಹೊಸ ತಂಡಗಳು ಕಾಲುಕಿತ್ತುವದು ನಡೆದಿದ್ದಿತು. ಮೋನಳಿಗೆ ಅವರನ್ನು ಕಂಡರೆ ಕಸಿವಿಸಿಯುಂಟಾಗುವದು ಓಸ್ಕಾರನ ಪಾಳಿಯಾದರೂ ಇಂದಿಲ್ಲ ನಾಳೆ ಬಂದೇಬರುವದು. ಆ ವಿಚಾರ ಬಂದೊಡನೆ ಅವಳಿಗೆ ಸಹಿಸಲಸಾಧ್ಯವಾಗುವದು. ಕರ್ಕ ಪ್ಯಾಟ್ರಿಕ್ಕನನ್ನು ಸುತ್ತಿಕೊಂಡು ಭಾರವಾದ ಹೆಜ್ಜೆಗಳನ್ನಿಕ್ಕುತ್ತ ಓಸ್ಕಾರನು ಹೋಗುತ್ತಿರುವದು ಅವಳ ಕಣ್ಣಿಗೆ ಬಿದ್ದಿತು; ಅವನ ದರ್ಶನವು ಅವಳಲ್ಲಿ ಇಲ್ಲದ ವೇದನೆಯನ್ನುಂಟುಮಾಡಿತು.

ಕಡೆಗೆ, ನಿರಾಶೆಯ ನಿಶೆಯಲ್ಲಿಯೇ ಆಶಾಕಿರಣಗಳು ಬೆಳಗತೊಡಗಿದವು. ಅಲ್ಲಿಯೆ ಹುಟ್ಟಿ, ಬೆಳೆದು, ದೊಡ್ಡವಳಾದ ಅವಳಿಗೆ ನಾಕಾಲೋಯ್‌ದ ಸಾವಿರಾರು ನೆನಪುಗಳು ಕಣ್ಮುಂದೆ ಕಟ್ಟಿದವು; ಮೇಲಾಗಿ ಅವಳ ಜನ್ಮಭೂಮಿ. ಅಂದಮೇಲೆ ಅದರ ಮೇಲಿನ ಮಮತೆ ಅಷ್ಟಿಷ್ಟಲ್ಲ; ಆದರೂ ಅದೇ ನಡುಗಡ್ಡೆಯಲ್ಲಿ—ಅದೇಕೆ ಈ ಜಗತ್ತಿನಲ್ಲಿ ಇದೊಂದೇ ಸ್ಥಳವಲ್ಲವೆಂಬ ಅರಿವೂ ಈಗ ಅವಳಲ್ಲುಂಟಾಗಿದೆ. ಅಂಥ ಸ್ಥಳಗಳು ಬೇಕಾದಷ್ಟಿವೆ. ಉತ್ತರದಿಕ್ಕಿನಲ್ಲಿರುವ ಒಂದು ಒಕ್ಕಲುಮನೆಯು ನವಂಬರ

ತಿಂಗಳಿನಲ್ಲಿ ಲಾವಣಿಕೊಡುವದಿದೆಯೆಂಬ ಸುದ್ದಿಯನ್ನು ಅವಳು ಕೇಳಿದ್ದಳು. ಅದು ಬಲು ವಿಸ್ತಾರವಾದ ಕ್ಷೇತ್ರ. ಅದನ್ನು ಸಾಗುವಳಿ ಮಾಡಲು ಅಸಾಧ್ಯವಾದುದು. ಯಾಕಂದರೆ ಸಾಮಾನು-ಸುಮಾನು ದನಕರಗಳು-ಮೊದಲಾದ ಸೌಕರ್ಯ ದೊಡ್ಡ ಪ್ರಮಾಣದಿಂದ ಬೇಕು. ಅವಳಿಗೆ ಮಾತ್ರ ಸಾಧ್ಯವಾಗಬಹುದಿತ್ತು. ಇದ್ದಬದ್ದ ಆಸ್ತಿಯನ್ನೂ ಯುದ್ಧದ ಪ್ರಸಂಗದಲ್ಲಿ ಸಂಗ್ರಹವಾದ ದುಡ್ಡನ್ನೂ ಸಕಲ ಸಲಕರಣೆಗಳನ್ನು ಕೊಳ್ಳುವದರಲ್ಲಿ ವಿನಿಯೋಗಿಸಲು ಸಿದ್ಧಳಾಗಿದ್ದಳು.

ಆ ಹೊಲದ ಯಜಮಾನನ ಕಡೆಗೆ ಹೋಗುವ ಸಿದ್ಧತೆಗಾಗಿ ಅವಳು ತನ್ನ ಕೋಣೆಗೆ ಹೋದಳು. ಮನೆಯ ಮುಂದಿನ ಬೀದಿಯ ಕಡೆಯಿಂದ ಕುದುರೆಯ ಖುರಪುಟಧ್ವನಿಯು ಕೇಳಿಸಿತು. ಇವಳಿಗಾಗಿ ಆಸೆಪಡುತ್ತಿದ್ದ ಆ ಲಾಂಗ್‌ಜಾನ್ ಕಾರ್ಲೆಟನು ದೊಡ್ಡದೊಂದು ಕುದುರೆಯನ್ನೇರಿ ಮೋನಳ ಕಡೆಗೆ ಹೊರಟಿದ್ದನು. ಅಲ್ಲಿಂದಲೇ ಅವಳನ್ನು ಕೂಗಿದನು. ತಾನು ಬರುವವರೆಗೆ ಅಲ್ಲಿಯೇ ನಿಲ್ಲಬೇಕೆಂದು ಮೇಲಿನಿಂದಲೇ ಕೂಗಿ ಹೇಳಿದಳು. ಅವನ ಸ್ವಭಾವದ ತಕ್ಕ ಮರ್ಯಾದೆ ಮಾಡಿದಳು.

'ಏನು, ಜಾನ್‌ಕಾರ್ಲೆಟ್? ಇಲ್ಲಿಗೆ ಬಂದ ಕಾರಣ?'

'ನಿನಗೆ ಸುದ್ದಿ ಹತ್ತಿಲ್ಲವೆ? ನಾನೀಗ ಈ ನಾಕಾಲೋಯ್‌ದ ಹೊಸ ಲಾವಣಿದಾರನು. ಇನ್ನೂ ಕೇಳಿಲ್ಲವೇ?'

'ನಾನು ಈವರೆಗೂ ಕೇಳಿರಲಿಲ್ಲ. ನಿನ್ನ ಈ ಬಾಯಿಂದಲೇ ಕೇಳಿದ್ದು. ಆಗಿರಬಹುದು—ನೀನು ಲಾವಣಿದಾರನಾದರೆ-ಮುಂದೇನು?'

'ನೀನಿನ್ನೂ ಎಷ್ಟು ದಿನಗಳವರೆಗೆ ಇಲ್ಲಿರತಕ್ಕವಳು?'

'ಲಾವಣಿಯ ಅವಧಿಯು ಪೂರ್ಣ ಮುಗಿಯುವವರೆಗೆ ಇರುತ್ತೇನೆ. ಹಂ, ಮತ್ತೇನು ಬೇಕು ತಮಗೆ?'

'ನೀನು ಅಲ್ಲಿಯವರೆಗೆ ಯಾತಕ್ಕಿರುವಿ? ಆ ದಿನ ಬರುವಷ್ಟರಲ್ಲಿ ಕ್ಯಾಂಪು ಪೂರ್ಣ ಬರಿದಾಗುವದು. ಆ ಜನರೆಲ್ಲರೂ ಹೋದಮೇಲೆ ಹಾಲಿನ ಗತಿಯೇನು? ಯಾರು ತೆಗೆದುಕೊಳ್ಳಬೇಕು?'

'ಅವರು ಇಲ್ಲಿಗೆ ಬರದ ಮೊದಲು ಏನು ಮಾಡುತ್ತಿದ್ದೆನೋ-ಅದನ್ನೇ ಮತ್ತೆ ಪ್ರಾರಂಭಿಸುತ್ತೇನೆ.'

'ಅದು ಈಗ ಸರಿಯಾಗಿ ಸಾಗದು. ಆ ಮೊದಲಿನ ವರ್ತನೆಯನ್ನು ನೀನು ತಪ್ಪಿಸಿದ್ದರಿಂದ ಮೊದಲಿನಂತೆ ಈಗ ಸಾಗುವದು ಸುಲಭವಲ್ಲ.'

'ಅದೇಕೆ ಸಾಗದು? ಅದು ಮುಂದಿನಂತೆ ಸಾಗಬಲ್ಲುದೆಂದು ನನಗೆ ನಂಬಿಗೆಯಿದೆ; ನೀನು ಹೇಳಿದರೆ ಬಿಡುವೆನೆ?'

'ಹಾಗೆ ನನಗೆನಿಸುವದು. ಪ್ರತಿಯೊಬ್ಬರೂ ಹಾಗೆ ಹೇಳದಿರರೆಂದು ನಾನು ನಂಬಿದ್ದೇನೆ. ಬೇಕಾದರೆ ನಿನ್ನ (ಕಾಯಂ) ಹಳೆಯ ಗಿರಾಕಿಗಳನ್ನು ಕೇಳಿಕೋ. ಆಂದರೆ ತಿಳಿಯುವದು.'

'ಸಾಧ್ಯವಾಗಲಿ, ಬಿಡಲಿ. ನಿನಗದರ ಉಸಾಬರಿಯೇಕೆ? ನೀನೇ ಅವರನ್ನು ಬೇಕಾದರೆ ಕೇಳಿಕೋಹೋಗು. ಅದು ನನಗೆ ಬೇಡ' ಎಂದು ಸಿಟ್ಟಿಗೆದ್ದು ಹಿಂದಿರುಗಿದಳು.

'ಸ್ವಲ್ಪ ತಡೆ; ಇನ್ನೂ ಕೇಳುವದಿದೆ. ಭೂಮಿಯನ್ನು ಹಾಳುಗೆಡವಿದ್ದರಿಂದ ಆದ ಹಾನಿಯನ್ನು ನೀನು ತುಂಬಿಕೊಡಬೇಕಾಗುವದು.'

'ಏನು ಹಾಳಾದ ಬಗ್ಗೆ?' ಎಂದು ಬೇಸರದಿಂದ ಕೇಳಿದಳು.

'ಈ ಹೊಲವನ್ನು ಕ್ಯಾಂಪಿಗಾಗಿ ಕೊಡುವ ಮುಂದೆ ಸರಕಾರದೊಡನೆ ಆದ ಕರಾರಿನ ಮೇರೆಗೆ ಮನೆಗಳ ದುರಸ್ತಿಯನ್ನು ಹೊಲದ ಯಜಮಾನನು ಮಾಡಿಸಿಕೊಡಬೇಕು. ಹೊಲದ ದುರಸ್ತಿಯನ್ನು ಲಾವಣಿದಾರನು ಮಾಡಬೇಕೆಂದು ಗೊತ್ತಾಗಿರುವದು' ಎಂದು ಕಾರ್ಲೆಟನು ನೆನಪುಮಾಡಿಕೊಟ್ಟನು.

'೨೫೦೦೦ ಜನರು ನಾಲ್ಕು ವರುಷ ಇಲ್ಲಿ ವಾಸವಾಗಿದ್ದ ಸ್ಥಳವನ್ನು ಹೊಲವನ್ನಾಗಿ ಸಾಗುಮಾಡಲು ಹಣವೇನು ಕಡಿಮೆ ಹಿಡಿಯಲಾರನು' ಎಂಬ ವಿಚಾರವು ಅವಳನ್ನು ಎಚ್ಚರಿಸಿತು.

ಸ್ವಲ್ಪ ತಡೆದು ಅವಳು ಕಾರ್ಲೆಟನನ್ನು ಎಷ್ಟು ವೆಚ್ಚ ತಗಲಬಹುದೆಂದು ವಿಚಾರಿಸಿದಳು. ಅವಳು ಗಾಬರಿಯಾಗುವಂಥ ದೊಡ್ಡ ಅಂಕಿಯನ್ನು ಅವನು ಹೇಳಿದನು.

'ಮೂರು ವರುಷದ ಲಾವಣಿ ಹಣಕ್ಕಿಂತೇನೂ ಕಡಿಮೆ ಹಿಡಿಯು ಲಾರದು. ಅಷ್ಟಾದರೆ ಮಾತ್ರ ಹೊಲವನ್ನಾಗಿ ಮಾಡಲಾಗುವದು.'

ಮೋನಳು ದೀರ್ಘಶ್ವಾಸವನ್ನು ಬಿಟ್ಟಳು. ಮುಖವು ಬಿಳುಪೇ ರಿತು. ಹಣದ ಮಾತೆಂದರೆ ಎಲ್ಲರೂ ಹಣ್ಣಾಗುವದು ಸ್ವಾಭಾವಿಕವಲ್ಲವೆ?

'ಅಷ್ಟು ಕೊಟ್ಟುಬಿಟ್ಟರೆ—ನನ್ನ ಹತ್ತಿರ ಒಂದು ಕವಡಿಯೂ ಕೂಡ ಉಳಿಯದು.'

'ಅದ್ಹೇಗೆ? ಸರಕಾರದವರಿಂದ ಈ ಕ್ಯಾಂಪಿನ ಬಾಡಿಗೆಯೆಂದು ಬೇಕಾದಷ್ಟು ಹಣವನ್ನು ಸೆಳೆದಿರುತ್ತೀ. ಬಂಗಾರದ ಗಟ್ಟಿಯನ್ನು ಮಾಡಿ ಹೂಳಿಟ್ಟಿರಲೂ ಬಹುದು; ನಿನಗೇನು ಕಡಿಮೆ?'

'ನಿಜವಾಗಿಯೂ ಹಣವುಳಿಯಲಾರದು. ಕಳ್ಳ ಗಂಟೆಲ್ಲಿಂದ ಬರ ಬೇಕು? ಇದ್ದುಬಿದ್ದುದೆಲ್ಲವನ್ನೂ ಇಲ್ಲಿಯೇ ತೊಡಗಿಸಿದ್ದೇನೆ. ಬೇರೆ ಹಣವನ್ನೆಲ್ಲಿಂದ ತರಲಿ?'

ಜೊಂಡ ಮೈಯುಳ್ಳ ಅವನು ಚಬುಕದಿಂದ ತನ್ನ ಕಾಲಿನ ಬೂಟು ಗಳಿಗೆ ಹೊಡೆದುಕೊಂಡು 'ಅಂತೂ ಹೊಲದಲ್ಲಿಯಾದರೂ ಇದೆ. ಇಷ್ಟೇ ಸಾಕು' ಎಂದು ಚೀರ ಧ್ವನಿಯನ್ನು ತೆಗೆದನು.

ಆ ಮೇಲೆ ಕುದುರೆಯಿಂದ ಕೆಳಗಿಳಿದು, ಹುಚ್ಚುಚ್ಚಾರ ಬಡಿ ಯುತ್ತ ಅವಳ ಹತ್ತಿರ ಬಂದು ನಿಂತನು. 'ಇಲ್ಲಿ ನೋಡು, ಮೋನಾ. ಕಾರ್ಲೆಟನು ಕಠೋರನು ಎಂದು ಯಾರೂ ಅನ್ನುವದಿಲ್ಲ. ಹೊಲದಲ್ಲಿರುವ ದೆಲ್ಲವನ್ನು ಇದ್ದಕ್ಕಿದ್ದಂತೆ ಬಿಟ್ಟುಕೊಡು. ಅಂದರೆ ನಿಂತಕಾಲ ಮೇಲೆ ಎಲ್ಲವನ್ನೂ ಬಗೆಹರಿಯಿಸಿಕೊಳ್ಳುವೆನು.'

ಕೆಲ ನಿಮಿಷ ಸುಮ್ಮನೆ ನಿಂತು, ಮೋನಳು ಅವನನ್ನು ಬೆರಗು ಗಣ್ಣುಗಳಿಂದ ನೋಡಿ 'ಜಾನ್ ಕಾರ್ಲೆಟ್, ನನ್ನ ತಂದೆಯ ಹೊಲದಿಂದ ನನ್ನನ್ನು ಬೀದಿಯ ಭಿಕಾರಿಯನ್ನಾಗಿ ಮಾಡಿ ಹೊರಗೆ ಹಾಕುವಿಯಾ?' ಎಂದು ಉಸಿಗರೆದಳು.

'ಹುಚ್ಚೀ, ಅಂಥ ಕಾರಣವೇನಿದೆ? ನೀನು ಬೆನ್ನು ಹತ್ತಿ ಬರಬೇಕೆಂದು ಇಚ್ಛಿಸುವವರು ಯಾರಾದರೂ ಇರುತ್ತಾರೆಯೆ? ಇದ್ದರೆ—ಅವನು ತನ್ನ

ದೇಶಕ್ಕೆ ಹೋದರೆ..? ಇಲ್ಲಿ ನೀನು ಅವನಿಗೆ ಬೇಕಾದ್ದು ಮಾಡಿರಬಹುದು. ಆ ಮೇಲೆ....'

ಮೋನಳು ಕೆಂಡವನ್ನೇ ಕಾರಿದಳು. ಮುಖವು ಕೆಂಪೇರಿತು. ಅವನನ್ನು ದುರುಗುಟ್ಟಿ ನೋಡುತ್ತ 'ತುಡುಗಾ, ನೀಚಾ, ಹೊಲೆಯಾ ಇಲ್ಲಿಂದ ಮೊದಲು ಹೊರಡು, ಇಲ್ಲವ್ವನ್ನು ನನ್ನ ಮುಂದೆ ಹಚ್ಚಬೇಡ' ಎಂದು ಬಾಯಿ ಬಂದಂತೆ ಬಿರುಸು ಬಾಣಗಳನ್ನು ಹಾರಿಸಿದಳು.

ಆ ಮಾತಿನಮಲ್ಲನು ಕುದುರೆಯನ್ನೇರಿದನು. ಲಗಾಮನ್ನು ಜಗ್ಗಿ ಹಿಡಿದುಕೊಂಡು, ಸೆಟೆದು ಕುಳಿತು, 'ಒಳ್ಳೆ ಮಾತಿನಿಂದ ಒಪ್ಪದಿದ್ದರೆ, ಕಾಯಿದೆಗಳಿವೆ; ಸತ್ತಿಲ್ಲ. ನನ್ನ ಹಣವೆಲ್ಲವೂ ಮುಟ್ಟುವವರೆಗೆ ಒಂದು ರವದಿಯ ಚೂರು ಕೂಡ ನಿನಗೆ ಸಿಗದಂತೆ ಮಾಡುವೆನು' ಎಂದೆನ್ನುತ್ತ ಭಾವೀಲಾವಣಿದಾರನೆಂಬ ಹೆಮ್ಮೆಯಿಂದ ಮೀಸೆಯಮೇಲೆ ಕೈಹಾಕುತ್ತ ಸಾಗಿದನು.

'ಅದು ಏನು ಬೇಕಾದ್ದಾಗಲಿ. ನನ್ನ ಕಣ್ಣೆದಿರು ನಿಲ್ಲಬೇಡ. ಹೋಗು ಮೊದಲು' ಎಂದವಳೆ, ಹತ್ತಿರ ಬಿದ್ದಿದ್ದ ಕಟ್ಟಿಗೆಯ ತುಂಡನ್ನು ತೆಗೆದುಕೊಂಡು ಕಸುವಿದ್ದಷ್ಟು ಜೋರಿನಿಂದ ಒಗೆದಳು.

ಅದರ ಹೊಡೆತವನ್ನು ತಪ್ಪಿಸಲು ಯತ್ನಿಸುವಷ್ಟರಲ್ಲಿ ಅದು ಕುದುರೆಯ ಪಕ್ಕಡಿಗೆ ತಾಗಿತು. ಅದು ಹಿಂಗಾಲುಗಳನ್ನು ಹಾರಿಸಿ, ಅಂಟದುಗಾಲು ಕೊಟ್ಟು, ಓಡಹತ್ತಿತು. ಏನನ್ನೋ ಬಟಗುಟ್ಟುತ್ತ ಕುದುರೆಯ ಓಟವನ್ನು ಆಟೋಪದಲ್ಲಿ ತರಲು ಅವನು ಯತ್ನಿಸುತ್ತ ಕಣ್ಮರೆಯಾದನು.

ಈ ಮೋಜನ್ನು ನೋಡುತ್ತ ನಿಂತಿದ್ದ ಕೆಲವು ಕಾವಲುಗಾರರು ಹೊಟ್ಟೆಹುಣ್ಣಾಗುವಂತೆ ನಕ್ಕರು. ಮೋನಳು ಚಿಂತಾಕ್ರಾಂತಳಾಗಿ ಕಣ್ತುಂಬ ನೀರು ತುಂಬಿಕೊಂಡು ಮನಸಿಲ್ಲದೆ ಮನೆಯೊಳಹೋದಳು. ಇದ್ದಷ್ಟು ಆಸ್ತಿಯೆಲ್ಲವನ್ನು ಅವನು ಕಸಿದುಕೊಂಡರೆ, ಅವಳ ಪಾಲಿಗೆ ಈ 'ನಾಕಾಲ್ಯೋಯ್' ಈ 'ನಡುಗಡ್ಡೆ'ಯು ಎರವಾದಂತಾಗುವವು.

ಬಹಳ ರಾತ್ರಿಯಾಗಿತ್ತು. ಪುನಃ ಓಸ್ಕಾರನು ಬಂದನು. ಕಣ್ಣು ಕೆರಳಿದ್ದವು. ಮುಖವು ಇಳಿದುಹೋಗಿತ್ತು. 'ಇಲ್ಲಿ ನಡೆದುಹೋದ

ಸುದ್ದಿಯನ್ನು ನಾನು ಕೇಳಿದೆನು. ನಾನು ಸ್ವತಂತ್ರನಾಗಿದ್ದರೆ ಅವನ ಮೆಯ್ಗೊಳುಬನ್ನು ಪುಡಿಪುಡಿ ಮಾಡುತ್ತಿದ್ದೆ. ಆದರೇನು ಮಾಡುವುದು? ನನ್ನ ಸಲುವಾಗಿ ನೀನಿಷ್ಟು ಕಷ್ಟಪಡುತ್ತಿರುವುದನ್ನು ನಾನಿನ್ನು ಸೈರಿಸಲಾರೆನು. ಮೋನಾ, ನನ್ನ ಆಶೆಯನ್ನು ಬಿಟ್ಟುಬಿಡು' ಎಂದನು.

ಇದೆ ಮೊದಲನೆಯ ಸಲವೆ ಅವರ ಪ್ರಣಯ ಪ್ರೀತಿಯ ಸನ್ಮತಿಯು ಹೊರಬಿದ್ದುದು. ಮೋನಳು ದಾಗುಬಡಿದು 'ಓಸ್ಕಾರನೇ, ನಿನ್ನ ಆಶೆಯನ್ನು ನಾನು ಬಿಡಬೇಕೆಂದು ನೀನು ಇಚ್ಛಿಸುವಿಯಾ?' ಎಂದು ಕೇಳಿದಳು. ಅವನಿಂದ ಮಾರುತ್ತರವು ಬರಲಿಲ್ಲ.

'ಎಲ್ಲರಂತೆ ನೀನು ಇಲ್ಲಿಂದ ತೆರಳುವದನ್ನು ನಾನು ಯಾವ ಕಣ್ಣುಗಳಿಂದ ನೋಡಲಿ? ಹೇಗೆ ಸಹಿಸಲಿ! ನಿನ್ನ ವಿಚಾರವನ್ನು ಬಿಟ್ಟುಬಿಡುವದು ನನ್ನಿಂದಾದೀತೆಂದು ತಿಳಿದುಕೊಂಡಿರುವಿಯಾ' ಎಂದು ಮತ್ತೆ ಕೇಳಿದಳು.ಆದರೂ, ಅವನಿಂದ ಉತ್ತರವೇ ಹೊರಡಲಿಲ್ಲ. ಅವಳು ಸುಮ್ಮನಿರದೆ ಮತ್ತೂ ಕೇಳಿದಳು: 'ನೀನೂ ನನ್ನ ಆಶೆಯನ್ನು ಬಿಡು. ಸಂಪೂರ್ಣವಾಗಿ ನನ್ನನ್ನು ಮರೆತುಬಿಡು. ಇಷ್ಟನ್ನಾದರೂ ನೀನು ಮಾಡಲಾರೆಯಾ?'

'ಆ ಮಾತು ದೇವರಿಗೊಬ್ಬನಿಗೇ ಗೊತ್ತು. ಆಡಿ ತೋರಿಸಲಾರೆ' ಎಂದಂದು ಅವನು ಮರು ನಿಮಿಷವೇ ಅಲ್ಲಿಂದ ತೆರಳಿದನು.

---

## ಜಾತಿದ್ವೇಷ

ಮೂರುದಿನಗಳ ಮೇಲೆ ಮತ್ತೆ ಓಸ್ಕಾರನು ಬಂದನು. ಅವನು ವಾಡಿಕೆಯಂತೆ ಮನೆಯೊಳಗೆ ಪ್ರವೇಶಿಸಲಿಲ್ಲ; ಆದುದರಿಂದ ಅವಳೂ ಬಾಗಿಲಿನಲ್ಲಿಯೇ ನಿಂತುಕೊಂಡು ಅವನನ್ನು ಮಾತನಾಡಿಸಬೇಕಾಯಿತು. ಅವನ ಕಣ್ಣುಗಳು ಇಂದು ಮಿನುಗುತ್ತಿದ್ದವು. ಹರುಷದಲ್ಲಿದ್ದವನಂತೆ ಅವನ ಮುಖಮಂಡಲವು ಅರಳಿತ್ತು; ಏನೋ ಹೇಳಬೇಕೆಂಬ ಆತುರತೆಯು ಹೊರಸೂಸುತಿತ್ತು.

'ಮೋನಾ, ನಿನಗೆ ಕೆಲವು ಸಲಹೆಗಳನ್ನು ಕೊಡಲು ಬಂದಿದ್ದೇನೆ. ಕೇಳಿಕೊಳ್ಳುವಿಯಾ?'

'ಹೇಳಿಬಿಡು. ಒಪ್ಪಿಗೆಯಾಗುವಂತಿದ್ದರೆ, ಅದರಂತೆ ನಡೆಯಲು ನನ್ನದೇನು ಅಡ್ಡಿ?'

'ಈ ಪ್ರದೇಶದಲ್ಲಿ ವಾಸಿಸುವವರಿಗೆ ಕ್ಷುದ್ರಭಾವನೆಗಳು, ಕೀಳು ವಿಚಾರಗಳಿರುವದು ಆಶ್ಚರ್ಯವಲ್ಲ. ಎಲ್ಲರೂ ಹಾಗಿರುವದಿಲ್ಲ. ಆದರೂ ಇಂಗ್ಲಿಷರು ಅವರಂತೆಯಲ್ಲ. ಇಂಗ್ಲಿಷರು ದೊಡ್ಡ ಮನಸಿನವರು, ಉದಾತ್ತ ಭಾವನೆಯುವರು. ನೀನು ನನ್ನೊಡನೆ ಇಂಗ್ಲಂಡಕ್ಕೆ ಬರುವಿಯಾದರೆ......'

'ಓಸ್ಕಾರ, ಏನು ವಿಚಾರವಿದೆ? ಪೂರ್ಣ ಹೇಳು. ಅರ್ಧಕ್ಕೇಕೆ ನಿಲ್ಲಿಸಿದೆ?'

ಅವನು ತನ್ನ ವಿಷಯವಾಗಿ ಅವಳಿನ್ನೂ ಕೇಳದಿದ್ದ ಅನೇಕ ಮಾತುಗಳನ್ನು, ಸಂಗತಿಗಳನ್ನು ಅವಳ ಮುಂದೆ ಹೇಳಬಯಸಿದನು:

'ನಾನೊಬ್ಬ ಎಂಜಿನಿಯರನು. ತಿಂಗಳೊಂದಕ್ಕೆ ೧೦೦೦ ವರೆಗೆ ಸಂಬಳ. ಇಲ್ಲಿಗೆ ಬಂಧಿಸಿ ತರುವ ಮೊದಲು ಮೆಸೆರ್ಯಲ್ಲಿರುವ ಇಂಗ್ಲಿಷ ಕಂಪನಿಯೊಂದರಲ್ಲಿ ಮುಖ್ಯ ಎಂಜಿನಿಯರನಾಗಿದ್ದೆ. ಯುದ್ಧವು ಪ್ರಾರಂಭವಾದೊಡನೆ ಸ್ವದೇಶದ ವಿಷಯಕ್ಕಿದ್ದ ಸಹಾನುಭೂತಿಯು ಅಡಗಿತು. ಮುಖ್ಯವಾಗಿ 'ಆ ತಲೆತಿರುಕ ಕೈಸರನ ಸಲುವಾಗಿ ಮತ್ತಿಷ್ಟು ಅವನಲ್ಲಿ ವಿರೋಧಭಾವವುಂಟಾಯಿತು' ಎಂದು ಹೇಳಿದನು.

'ಓಸ್ಕಾರ್! ಎಂಥ ಸುಂದರವಾದ ಬಾಳು!'

'ಇದು ಸತ್ಯವಾದ ಮಾತು; ಉಪ್ಪುಕಾರ ಹಚ್ಚಿದ ಮಾತಲ್ಲ. ಆ ದಿನಗಳಲ್ಲಿ ನಿಜವಾಗಿಯೂ ಅಪಮಾನವಾದಂತೆನಿಸಿತ್ತು; ಆದರೆ ಬ್ರಿಟಿಶ ಸರಕಾರವು ನನ್ನನ್ನು ತಮ್ಮ ಸೈನ್ಯದಲ್ಲಿ ಸೇರಿಸಿಕೊಳ್ಳಲು ಸಮ್ಮತಿಯನ್ನಿತ್ತಿದ್ದರೆ ನಾನು ಸೇರಿಯೇ ಬಿಡುತ್ತಿದ್ದೆ. ಅವರು ನಿರಾಕರಿಸಿದರು! ಉಪಾಯವಿಲ್ಲದಾಯಿತು; ತೆಪ್ಪಗಾದೆನು' ಎಂದು ಓಸ್ಕಾರನು ಮನಸನ್ನು ಬಿಚ್ಚಿದನು.

ಅವನ ಇಚ್ಛೆಯ ವಿರುದ್ಧವಾಗಿ ಅಧಿಕಾರಿಗಳು ಅವನನ್ನು ಬಂಧಿಸಿ ಇಲ್ಲಿಗೆ ತಂದರು. ಆ ಕಂಪನಿಯವನು ದಕ್ಷತೆಯಿಂದ ಕೆಲಸಮಾಡುವ ಓಸ್ಕಾರನನ್ನು ಉಳಿಸಿಕೊಳ್ಳಲು ಬಲು ಯತ್ನಿಸಿದನು. ಅವನಿಗೆ ಫಲದೊರೆಯಲಿಲ್ಲ. ಓಸ್ಕಾರನು ಅವನಿಂದ ಹೊರಡುವ ಸಮಯದಲ್ಲಿ ಕಂಪನಿಯ ಮುಖ್ಯಸ್ಥನು 'ಹಾಯಿನ್, ನೀನು ನಮ್ಮನ್ನಗಲಿ ಹೋಗುತ್ತಿರುವದರಿಂದ ವ್ಯಸನವಾಗುತ್ತಿದೆ ಉಪಾಯವಿಲ್ಲ; ಆದರೆ ಯುದ್ಧವು ಮುಗಿದ ಮೇಲೆ ನಿನಗಿಲ್ಲಿ ಬರಬೇಕೆಂದೆನಿಸಿದರೆ—ನಿನ್ನ ಸ್ಥಳವು ಮೀಸಲಿರುವದು' ಎಂದು ಹೇಳಿದನು.

'ಆದರೆ ಅವನು..ಈ..ಗ..ಇ..ರ..ಬ..ಹು..ದೇ....? ಅದೀಗ ದೊರೆಯುವದೆಂಬ ನಂಬಿಗೆಯಿದೆಯೇ ನಿನಗೆ?'

'ನಿಶ್ಚಯವಾಗಿಯೂ ದೊರೆಯುವದು. ಮೋನಾ, ಅವನು ಮರ್ದುಕ ಮನುಷ್ಯ. ಅಂಥವನು ಕೊಟ್ಟ ವಚನವನ್ನು ಪಾಲಿಸದಿದ್ದರೆ, ನಾನು ಮಾನವಕೋಟಿಯಲ್ಲಿಯೇ ವಿಶ್ವಾಸವಿಲ್ಲೆಂದು ತಿಳಿಯಬೇಕಾಗುವದು. ಆದ್ದರಿಂದ ನನಗೆ ಆ..ಶೆ..ಇದೆ..'

'ಹಾಗಾದರೆ ಒಳಿತಾಗುವದಿಲ್ಲವೇ? ಅವನಿಗೆ ಕಾಗದ ಬರೆದಿರುವಿಯಾ ಹೇಗೆ?'

'ಬೇಗನೆ ನನ್ನ ಬಿಡುಗಡೆಯಾಗಲಿದೆಯೆಂದು ಬರೆಯುತ್ತೇನೆ. ನೀನು ನನ್ನೊಡನೆ ಅಲ್ಲಿಗೆ ಬರಲು ಒಪ್ಪಿದರೆ ಎಷ್ಟು ಒಳಿತಾಗುವದು..'

ಅವಳ ಕಣ್ಣಲ್ಲಿ ನೀರು ತುಂಬಿದುದನ್ನು ಕಂಡು ಅವನು ಮಾತನ್ನು ನಿಲ್ಲಿಸಿದನು.

'ನಿನ್ನ ಹುಟ್ಟಿದ ಸ್ಥಳವನ್ನು ತೊರೆದು ಬರಲು ಕೇಳಿದುದಕ್ಕೆ ವ್ಯಸನವಾಯಿತೆ ಕ್ಷಮಿಸು' ಎಂದು ಓಸ್ಕಾರನು ಗೊಗ್ಗರ ದನಿಯಿಂದ ವಿಚಾರಿಸಿದನು.

'ಈ ಹೊಲವೆ? ಅಯ್ಯೋ! ಈಗದೇ ನನ್ನನ್ನು ಹೊರಗೆ ದಬ್ಬುತ್ತಲಿದೆ, ಓಸ್ಕಾರ್. ಅದರ ಕಳವಳವನ್ನು ಹೇಳತೀರದು. ಏನುಮಾಡಲಿ? ದಿಕ್ಕೇಡಿಯಾಗಿರುವೆ!'

'ಹಾಗಾದರೆ ನನ್ನೊಡನೆ ಇಂಗ್ಲೆಂಡಕ್ಕೆ ಬರುವಿಯಲ್ಲವೆ?'

'ಬಾರದೇನು ಮಾಡಲಿ?' ಎಂದು ಅವಳು ಅನ್ನುವಷ್ಟರಲ್ಲಿಯೇ ಅವನು ಪತ್ರವನ್ನು ಕೂಡಲೆ ಬರೆಯಲು ಉಬ್ಬಿನಿಂದ ಕುಕ್ಕೋಟವನ್ನು ಬಿಟ್ಟನು.

ಮೋನಳು ಸಮಾಧಾನದಿಂದ ಕಾಲವನ್ನು ಕಳೆಯಬೇಕೆಂದು ಶಕ್ತಿ ಮೀರಿ ಯತ್ನಿಸಿದಳು; ಆದರೆ ಅಸಂದಿಗ್ಧ ಸಂದೇಹಗಳು ಅವಳಿಗೆ ತೊಂದರೆ ಕೊಟ್ಟು ಅವಳ ಸಮಾಧಾನವನ್ನು ಹಾಳುಮಾಡುತ್ತಿದ್ದವು. ಕ್ಯಾಂಪನ್ನು ಕೆಡವಿ, ಒಯ್ಯಬಹುದಾದ ಎಲ್ಲ ಸಾಮಾನುಗಳನ್ನು ಹೇಗೆ, ಎಲ್ಲಿಗೆ ಸಾಗಿಸಬೇಕೆಂಬ ವಿಚಾರದಲ್ಲಿ ಗವ್ಹರ್ನರನೂ, ಕಮಾಂಡಂಟನೂ ಮಾತಾಡುತ್ತಿರುವದು ಮೋನಳ ಕಿವಿಗೆ ಬಿದ್ದಿತು. ನಿಂತುಕೊಂಡೇ ಮಾತನಾಡುತ್ತಿದ್ದರು. ಆ ಮಾತು ಈ ಮಾತು ಹೊರಟು ಕಡೆಗೆ ಶಾಂತಿ ಪರಿಷತ್ತಿನ ವಿಷಯವೂ ಹೊರಟಿತು.

'ಶಾಂತಿ ಪ್ರಸ್ಥಾಪಿತವಾದ ಮೊದಲನೆಯ ವರುಷವು ಯುದ್ಧದ ಕಡೆಕಡೆಯ ದಿನಗಳಿಗಿಂತಲೂ ಕೆಡಕಾದುದು' ಎಂದು ಕಮಾಂಡಂಟನು ತನ್ನ ಅಭಿಪ್ರಾಯವನ್ನು ವ್ಯಕ್ತಮಾಡಿದನು.

'ಎಲ್ಲವೂ ಒಂದೇ. ಅದರಲ್ಲೇನು ಹೆಚ್ಚುಕಡಿಮೆಯಿಲ್ಲ. ಇನ್ನೊಮ್ಮೆ ಆ ಕುಹಕರನ್ನು ನಂಬುವದು ಶುದ್ಧ ಮೂರ್ಖತನವು. ಈಗ ಆ ಜರ್ಮನ್ನ ಪಶುಗಳನ್ನು ತಲೆಯೆತ್ತಗೊಡದಂತೆ ಮಾಡಿದ್ದಾಗಿದೆ. ಇನ್ನೂ ಹಾಗೆಯೇ ಅವರ ನೆತ್ತಿಯನ್ನು ಕುಕ್ಕುತ್ತಲೇ ಇರಬೇಕು' ಎಂದು ಗವ್ಹರ್ನರನು ಉತ್ತರವಿತ್ತನು.

'ಸಾಹೇಬರೇ, ನಾನು ಹಾಗನ್ನುವವನಲ್ಲ. ಕೈಗೆ ಕೈ ಹತ್ತಿದಾಗ ಕಟುಕತನದಿಂದ ಜೀವದ ಹಂಗುದೊರೆದು ಬಡಿದಾಡುವದು. ಬಡಿದಾಟವು ನಿಂತಮೇಲೆ, ಅವರನ್ನು ಕ್ಷಮಿಸುವದು. ಕನಿಕರಪಟ್ಟು ಅವರಿಗೆ ನೆರವಾಗುವದೊಳಿತು' ಎಂಬ ಅಭಿಪ್ರಾಯದೊಂದಿಗೆ ತನ್ನ ಅನುಭವಕ್ಕೆ ಬಂದೊಂದು ಸಂಗತಿಯನ್ನು ಕಮಾಂಡಂಟನು ಉದಹರಿಸಿದನು.

'ಯುದ್ಧವು ಆದೇ ಆರಂಭವಾಗಿತ್ತು. ನಾನು ಮುಂಭಾಗದ

ಸೈನ್ಯದಲ್ಲಿದ್ದೆ. ಯುದ್ಧವು ಹುಮ್ಮಸಿನಿಂದ ಸಾಗಿತ್ತು. ನಾನೂ ಪರಿವೆಯಿಲ್ಲದೆ ಮುಂದೆ ನುಗ್ಗಿದೆನು. ಒಬ್ಬ ಜರ್ಮನ್ನ ಅಧಿಕಾರಿಯು ಒಂದು ತೆಗ್ಗಿನಲ್ಲಿ ಬಿದ್ದುದನ್ನು ಕಂಡೆ. ಪಾಪ! ಅವನಿಗೊದವಿದ ವಿಪತ್ತು ಸಾಮಾನ್ಯವಾದುದಲ್ಲ. ನಾವು ಅವನನ್ನು ಹೊರತೆಗೆದು ಉಪಚರಿಸುವದು ಆ ಹೊತ್ತಿನಲ್ಲಿ ಸಾಧ್ಯವಿರಲಿಲ್ಲ ಆದ್ದರಿಂದ ನಾನೂ ಅವನೊಡನೆ ಇದ್ದು ಬಿಡಲು ನಿಶ್ಚಯಿಸಿದೆನು. ಅವನು ಬಲು ಚುರುಕುಬುದ್ಧಿಯುವನೆಂದು ತೋರಿತು. 'ಕರ್ನಲ್, (ನಾನಾಗ ಕರ್ನಲ್ಲನಿದ್ದುದು ನಿಜ.) ಇದು ಬಲು ವಿಚಿತ್ರವಾದ ಸಂಗತಿಯೆಂದು ನಿನಗೆ ಕಾಣುವದಿಲ್ಲವೋ' ಎಂದು ಆ ಜರ್ಮನ್ನನು ನನಗೆ ಕೇಳಿದನು. 'ಅದು ಹೇಗೆ?' ಎಂದು ನಾನು ತಿರುಗಿ ವಿಚಾರಿಸಿದೆ. ಅದಕ್ಕವನು ಹೇಳತೊಡಗಿದನು 'ರಣಾಂಗಣದಲ್ಲಿ ನಾನು ನಿನಗೆ ಸಿಕ್ಕಿದ್ದರೆ ನನ್ನನ್ನು ನೀನು ನಿನ್ನ ಮಾತೃಭೂಮಿಯ ಸಲುವಾಗಿ ಕೊಲ್ಲದೆ ಬಿಡುತ್ತಿದ್ದಿಲ್ಲ. ಅದರಂತೆ ನಾನೂ ನನ್ನ ಪಿತೃಭೂಮಿಗಾಗಿ ನಿನ್ನನ್ನು ಯಮಸದನಕ್ಕೆ ಅಟ್ಟಲು ಯತ್ನಿಸುತ್ತಿದ್ದೆ. ಅದು ನಮ್ಮ ಕರ್ತವ್ಯವಲ್ಲವೇ? ಆದರೆ ಈಗ ನೀನು ಬಂದು ನನ್ನನ್ನು ಬಾಂಧವ ಭೂಮಿಗಾಗಿ ಇಲ್ಲಿ ರಕ್ಷಿಸುತ್ತಿರುವಿಯಲ್ಲವೇ?' ಎಂದು ಮೊದಲಾಗಿ ಮಾತನಾಡಿದನು. ಇಷ್ಟು ಹೇಳಬೇಕಾದರೆ ಅವನ ಉಸಿರು ಕೆಳಗೆ ಮೇಲಾಗುತ್ತಿತ್ತು. ಅವನಿಗೆ ಬಿಕ್ಕು ಬಂದಿತು. ನಾನು ಅವನನ್ನು ಎತ್ತಿ ತೊಡೆಯ ಮೇಲೆ ಮಲಗಿಸಿಕೊಂಡೆನು. ಕೊನೆಗೆ ಅವನಿಗೊಂದು ಮುದ್ದು ಕೊಟ್ಟೆನೆಂದು ಹೇಳಿದರೆ ತಾವು ತಪ್ಪೆಣಿಸಬಾರದಾಗಿ ಭಾವಿಸುತ್ತೇನೆ' ಎಂದು ಹೇಳಿ ಮುಗಿಸಿದನು.

ಇದನ್ನು ಕೇಳಿ ಮೋನಳ ಮೈಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಬಾಂ..ಧ..ವ..ಭೂಮಿ! ಇದೇ ಭಾವನೆಯೆ ಇನ್ನು ಜಗತ್ತಿನಲ್ಲಿ ಬೆಳೆಯಲಿದೆಯಲ್ಲವೆ? ಅಂದಮೇಲೆ ತಾನೂ ಓಸ್ಕಾರನೂ ಪ್ರೇಮದಿಂದ ಇಂಗ್ಲಂಡಿನಲ್ಲಿ ಬಾಳಬಹುದೆಂಬ ಕನಸನ್ನು ಕಂಡಳು.

ಅದೇ ರಾತ್ರಿ ಓಸ್ಕಾರನು ಮೋನಳ ಕಡೆಗೆ ಬಂದನು. ಮುಖವು ಬಾಡಿ ಬತ್ತಿ ಹೋಗಿದೆ. ಮಾತನಾಡಲು ಬಾಯಿಬರದು. ಎಲ್ಲಿಯಾದರೂ

ಕಾಲೂರಿ ನಿಲ್ಲಲು ಸ್ಥಳವನ್ನು ಶೋಧಿಸುವ ಆಶಾಕಿರಣಗಳೇ ಅವನಿಗೆ ಕಾಣಿಸದಾಗಿವೆ. ಕೈಲಿದ್ದ ಪತ್ರವನ್ನು ಅವಳಿಗೆ ಕೊಟ್ಟನು. ಮೆರ್ಸೆಯಲ್ಲಿರುವ ಆ ಬ್ರಿಟಿಶ್ ಕಂಪನಿಯವರಿಂದ ಉತ್ತರವು ಬಂದಿದೆ.

ರಾಯರೇ,

ನಿಮ್ಮ ಹತ್ತನೇ ತಾರೀಖಿನ ಪತ್ರವು ಮುಟ್ಟಿ ಅರ್ಥವಾಯಿತು. ಆ ಮೊದಲಿನ ಆಡಳಿತೆಗಾರರು ಯುದ್ಧದಲ್ಲಿ ವೀರಸ್ವರ್ಗವನ್ನೈದಿದ್ದಾರೆ. ತಮ್ಮನ್ನು ಆ ಮೊದಲಿನ ಸ್ಥಳದಲ್ಲಿ ನಿಯಮಿಸಬೇಕೆಂದರೆ ಅದೀಗ ತುಂಬಿರುವದು. ಒಂದು ವೇಳೆ ಆ ಸ್ಥಳವು ಬರಿದಾಗಿದ್ದರೂ ನಿಮ್ಮನ್ನು ತೆಗೆದುಕೊಳ್ಳುವದು ಅಸಾಧ್ಯವಾದ ಮಾತು. ಯಾಕಂದರೆ—ಇಂಗ್ಲಿಷ-ಜರ್ಮನ್ನ ದ್ವೇಷವು ಎಲ್ಲ ಕಡೆಗೆ ಪಸರಿಸಿ ಉಗ್ರಸ್ವರೂಪವನ್ನು ತಾಳಿದೆ ಬ್ರಿಟಿಶ್ ಕೂಲಿಕಾರರು ಜರ್ಮನ್ನ ಅಧಿಕಾರಿಯ ಕೈಕೆಳಗೆ ಕೆಲಸಮಾಡಲು ಎಂದಿಗೂ ಸಮ್ಮತಿಸರು. ಮೇಲಾಗಿ ತಾವು ಒಬ್ಬ ಇಂಗ್ಲಿಷರಾಕೆಯನ್ನು ಮದುವೆಯಾಗಿರುವೆವೆಂದು ಬರೆದ ಮೂಲಕ ಪರಸ್ಪರರಲ್ಲಿ ಆದರ, ಸಹಾನುಭೂತಿ ದೊರೆಯದು. ಮತ್ತಿಷ್ಟು ದ್ವೇಷವೇ ಬೆಳೆದೀತೆಂದು ವಿಷಾದದಿಂದ ತಿಳಿಸಬೇಕಾಗಿದೆ.

ಇಂತು— ತಮ್ಮ,

'ಮೋನಾ, ಈ ರೀತಿ ಅವರಿಂದ ಉತ್ತರವು ಬರಬಹುದೆಂಬ ಕಲ್ಪನೆಯೇ ನನ್ನ ತಲೆಯಲ್ಲಿ ಬಂದಿರಲಿಲ್ಲ.'

'ಓಸ್ಕಾರ್, ಅದು ಯುದ್ಧದ ಪರಿಣಾಮವು. ಅದೆಂದಿಗೂ ಮುಗಿಯಲಾರದೆ?'

'ಮೋನಾ, ಇಲ್ಲ. ಎಂದೂ ಇಲ್ಲ' ಎನ್ನುತ್ತ ಓಸ್ಕಾರನು ಮುಖವನ್ನು ಮುಚ್ಚಿಕೊಂಡು ಅಲ್ಲಿ ನಿಲ್ಲಲಾಗದೆ ಹೊರಟುಹೋದನು. ಜಡಹೃದಯಳಾಗಿ ಮೋನಳು ಮಲಗಲು ತೆರಳಿದಳು. ಇಂಗ್ಲಿಷ ಕೂಲಿಯವರು ಸಹ ಓಸ್ಕಾರನೊಡನೆ ಕೆಲಸ ಮಾಡಲು ಸಮ್ಮತಿಸದಿದ್ದರೆ, ಅವರ ಪಾಲಿಗೆ ಇಂಗ್ಲಂಡೂ ಎರವಾಯಿತು. ಜಾಂ..ಥ..ಪ.. ಭೂಮಿಯೂ ಒಂದು ಕ್ರೂರವಾದ ಕನಸು. ಅದು ವಿಚಾರಲೋಕದಲ್ಲಿಯೂ ಸುಳಿಯಬಾರದ ಸುಳ್ಳು ಕಲ್ಪನೆ.

ಮುಗುದೊಂದು ವಾರವು ಕಳೆಯಿತು. ಪ್ರತಿದಿನವೂ ಕ್ರಮೇಣವಾಗಿ ಕ್ಯಾಂಪು ತೆರವಾಗುತ್ತಲಿದೆ. ಈಗ ೨-ಳನೆಯ ಕಂಪೌಂಡಿನ ಜನರ ಸರತಿ ಬಂದಿದೆ. ಬಹುತೇಕವಾಗಿ ೩ನೆಯ ಕಂಪೌಂಡಿನ ಜನರು ಓಸ್ಕಾರ ನಂತೆ ಎಂಜಿನಿಯರರು, ಕಲಾಕುಶಲರು. ಇಲೆಕ್ಟ್ರಿಕ್ ಸಾಮಾನುಗಳನ್ನು ಮಾರಾಟಮಾಡಿದರೆ ಬೆಲೆಯು ಬರುವಂತೆ ಸರಿಯಾಗಿ ಕಿತ್ತುಹಾಕಲು ಅವರನ್ನು ಕೊನೆಗೆ ಕಳಿಸುವದೆಂದು ಗೊತ್ತಾಗಿದ್ದಿತು. ಅವರ ಪಾಳಿ ಯಾದರೂ ಬೇಗನೆ ಬಂದೇ ಬರುವದು-ಮುಂದೇನು? ಮತ್ತೆ ಕೆಲವು ದಿನಗಳ ಮೇಲೆ ಓಸ್ಕಾರನು ಪುನಃ ಬಂದನು. ಮುಖವು ಇಳಿದು ಹೋಗಿದೆ. ನಿದ್ರೆಯಿಲ್ಲದ್ದರಿಂದ ಕಣ್ಣು ಕೆಂಪಾಗಿವೆ; ಆದರೂ ಅವನ ಉತ್ಸಾಹವೇನು ಕುಂದಿರಲಿಲ್ಲ.

'ಮೋನಾ, ನಾವೇನು ಮಾಡಬೇಕೆಂಬುದನ್ನು ವಿಚಾರಮಾಡುತ್ತ ಈ ನಿರ್ಣಯಕ್ಕೆ ಬಂದಿರುತ್ತೇನೆ. ಹೇಳಲೇನು?'

'ಏನದು? ಬೇಗನೆ ಹೇಳು.'

'ಇಂಗ್ಲಿಷ ಜನರು ಕಠಿಣಹೃದಯರು, ಕ್ಷಮೆಮಾಡಲಾರರು; ಆದರೆ ಜರ್ಮನ್ನರು ಹಾಗಲ್ಲ.'

'ಏನು ಹಾಗಿರುವದಿಲ್ಲವೇ? ಏತರ ಮೇಲಿಂದ ಹೇಳುತ್ತೀ?'

'ನಮ್ಮ ಜನರದು ನನಗೆ ಗೊತ್ತಿಲ್ಲೆಂದರೇನು? ಪೂರ್ಣ ಗೊತ್ತಿದೆ. ಜರ್ಮನ್ನರು ದಯೆ-ದಾಕ್ಷಿಣ್ಯಗಳಿಲ್ಲದೆ ಯುದ್ಧಮಾಡುವರು-ಮಾಡಿಯೇ ತೀರುವರೆಂಬುದನ್ನು ನಾನು ಬಲ್ಲೆ. ಆದರೆ ಹೊಡೆದಾಟವು ಶಾಂತವಾದ ಮೇಲೆ ನಮ್ಮವರು ವೈರಿಗಳೊಡನೆ ಸ್ನೇಹಿತರಾಗಿರಬಲ್ಲರು.'

'ನಿನ್ನ ವಿಚಾರಗಳೇನು? ಯಾವ ಹಂಚಿಕೆಗಳನ್ನು ಹಾಕುತ್ತಿರುವಿ?'

-'ನಿನ್ನ ಒಪ್ಪಿಗೆಯಿದ್ದರೆ....ಜರ್ಮನಿಗೆ ಬರುವದು ಸಾಧ್ಯವೆಂದು ನಿನಗೆನಿಸಿದರೆ ಮಾತ್ರ...ಈ ವಿಚಾರ...ಇ..ಲ್ಲ..ದಿ..ದ್ದ..ರೆ.. ಇಲ್ಲ......'

'ಜರ್ಮನಿಗೇ?' ಎಂದು ದೊಡ್ಡದೊಂದು ನಿಟ್ಟುಸಿರು ಹಾಕಿದಳು.

'ಮೋನಾ, ನಿನ್ನ ಜನ್ಮಭೂಮಿಯನ್ನು ಬಿಟ್ಟು ಬರಹೇಳುವದು

ನಾಚಿಕೆಗೇಡೂ, ಪಾಪಕರವೂ ಎಂಬವನ್ನು ನಾನು ಬಲ್ಲೆ; ಆದರೆ ನೀನನ್ನುನಂತೆ ಅದೇ ನಿನ್ನನ್ನು ಹೊರಗೆ ತಳ್ಳುಹತ್ತಿದೆಯಲ್ಲವೆ? ಅಂದಮೇಲೆ ಎಲ್ಲಿಯಾದರೂ ಹೋಗಿ ನೆಲೆಸಲೇಬೇಕಲ್ಲವೇ?' ಮೋನಳು ಎರಡೂ ಕಿವಿಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಳು. ವಿಚಾರಮುದ್ರೆಯು ಅವಳನ್ನು ಧ್ಯಾನಸ್ಥಳನ್ನಾಗಿ ಮಾಡಿತು.

'ಓಸ್ಕಾರ್, ಆ ಬಗ್ಗೆ ಮಾತನಾಡಬೇಡ. ಇಂಥ ಮಾತುಗಳನ್ನು ನಾನು ಕೇಳಲಾರೆ! ಅದು ಅಸಾಧ್ಯವಾದ ಮಾತು' ಎಂದಳು ಮೋನಳು.

ಒಂದೆರಡು ನಿಮಿಷಗಳವರೆಗೆ ಓಸ್ಕಾರನು ಸುಮ್ಮನಾಗಿ, ನಡುಗುವ ಧ್ವನಿಯಿಂದ ಮಾತನಾಡತೊಡಗಿದನು: 'ಮೋನಾ, ದೇವರ ಸಾಕ್ಷಿಯಾಗಿಯೂ ನಾನು ನಿನ್ನನ್ನು ಬಿಟ್ಟಿರಲಾರೆ. ನನ್ನ ಜೀವಿತವೆಲ್ಲವನ್ನೂ ನಿನಗಾಗಿ ಅರ್ಪಿಸಿದ್ದೇನೆ. ನೀನು ಪರಿತಪಿಸಬೇಡ. ನನ್ನ ಇಚ್ಛೆಯನ್ನು ಬಿಚ್ಚಿ ಹೇಳದೆ ವಿಧಿಯಿಲ್ಲ; ಬೇರೆ ನಮಗೆ ಗತಿಯಿಲ್ಲ.'

'ಆದರೆ ನಾನು ಅಲ್ಲಿ ಬರುವದು ಹೇಗೆ?'

'ಬೇರೆ ಹೆಣ್ಣುಮಕ್ಕಳು ಹೋಗುವಂತೆ. ಅದರಲ್ಲೇನು ಮಹಾ ವಿಶೇಷವಿದೆ? ಅನೇಕ ಜರ್ಮನ್ನರು ತಮ್ಮ ಜರ್ಮನ್ ಹೆಂಡಂದಿರನ್ನು ಕರೆದುಕೊಂಡು ಹೋಗುವಂತೆ ನಾನಾದರೂ ನನ್ನ ಮುದ್ದು ಇಂಗ್ಲಿಷ ಹೆಂಡತಿಯನ್ನು ಕರೆದುಕೊಂಡು ಹೋಗಬಾರದೇಕೆ?'

'ಹೆಂಡತಿಯೇ?'

'ನಿಶ್ಚಯವಾಗಿಯೂ ಹೌದು. ಪಾದ್ರಿಯು ನಮ್ಮ ಮದುವೆಯನ್ನು ಮಾಡುವನು.'

'ಯಾವ ಪಾದ್ರಿಯು ಅವನು ನಮ್ಮ ಮದುವೆಯನ್ನು ಮಾಡಲು ಒಪ್ಪಿದವನು!'

'ಕ್ಯಾಂಪಿನಲ್ಲಿರುವವನು. ತೀರ ರಾತ್ರಿ, ಇಲ್ಲವೆ ಜುಮುಜುಮು ನಸುಕಿಲ್ಲಿ ಇಲ್ಲಿಯ ದೇವಾಲಯದಲ್ಲಿ ನಮ್ಮ ಮದುವೆ ಮಾಡಲೊಪ್ಪಿರುವನು. ನನ್ನ ಇಬ್ಬರು ಸ್ನೇಹಿತರು ಸಾಕ್ಷಿಗಾಗಿ ಬರುವರು. ಅಂದಮೇಲೆ ಯಾವ ಸಂದೇಹವು ಉಳಿಯಲಾರದು.'

'ಈ ಎಲ್ಲ ವಿಷಯವನ್ನು ಅವನಿಗೆ ತಿಳಿಸಿ, ಪೂರ್ವಸಿದ್ಧತೆಯನ್ನು ಮಾಡಿಯೇಬಿಟ್ಟಿರುವೆಯಲ್ಲ! ಅಂಡಮೇಲೇನು?'

'ಯಾವ ತಡೆಯಿದೆ? ಲ್ಯೂಥರಾನ್ ಪಾದ್ರಿಯಿಂದ ಲ್ಯೂಥರಾನ್ ದೇವಾಲಯದಲ್ಲಿ ಮದುವೆಯು ಜರುಗಿದರೆ ಜರ್ಮನಿಯ ಕಾಯದೆಗನು ಸಾರವಾಗಿ ಮದುವೆಯಾದಂತಾಗುವದು. ಆದುದರಿಂದ ಜರ್ಮನಿಯು ನಿನ್ನನ್ನು ಸ್ವೀಕರಿಸುವದು.'

'ಅಲ್ಲಿ ಹೋದ ಮೇಲೆ..ನಾವೆಲ್ಲಿರುವದು..ಆ..ವಿ..ಚಾ..ರ..ಕ್ಕೇ..ನು..ಮಾಡಿರುವೆ?'

'ಮೊದಲು ನನ್ನ ತಾಯಿಯ ಹತ್ತಿರ ಹೋಗುವದು.'

'ನಿನ್ನ ತಾಯಿಯ ಹತ್ತಿರವೇ?'

'ಮತ್ತಿನ್ನೆಲ್ಲಿಗೆ ಹೋಗುವದು? ಅವಳು ನಮ್ಮನ್ನು ನೋಡಿ ಸಂತೋಷಿಸುವಳು. ಇಂಥ ತಾಯಿಯು ಎಲ್ಲರಿಗೂ ದೊರೆಯುವದು ಅಪರೂಪ. ಅವಳ ಹೃದಯವು ವಿಶಾಲವಾದುದು. ಬಲು ಅಂತಃಕರಣ ದವಳು. ನನಗೆ ಅವಳು ವಾರಕ್ಕೊಂದು ಪತ್ರವನ್ನು ಬರೆದೇ ಬರೆದಿದ್ದಾಳೆ. ಅವಳನ್ನು ಬಿಟ್ಟಿನ್ನಾರು ನನಗಿರುವರು? ಅವಳು ನಮ್ಮನ್ನು ಸ್ವಾಗತಿಸುವಳು.'

'ಓಸ್ಕಾರ್, ಅವಳು ನನಗೆ ಆಶ್ರಯವನ್ನು ಕೊಡುವಳೆಂದು ನಿನಗೆ ನಂಬಿಗೆಯಿದೆಯೇ?'

'ಇರದೇನು! ಅವಳು ನನ್ನ ಹೆತ್ತಮ್ಮನಲ್ಲವೇ? ನನ್ನೊಡನೆ ಬಂದಿದ್ದ ನಿನ್ನನ್ನು ಅವಳು ಪ್ರೀತಿಸುವದಿಲ್ಲವೆ? ಒರಮಾಡಿಕೊಳ್ಳುವದಿಲ್ಲವೇ? ಪಾಪ! ಅವಳೂ ವಯಸಾದವಳು. ನನ್ನ ತಂಗಿಯು ತೀರಿಕೊಂಡಂದಿನಿಂದ ಒಬ್ಬಳೇ ಆಗಿದ್ದಾಳೆ. ನಮ್ಮ ಮದುವೆಯಾಯಿತೆಂದರೆ ನಾನು ಅವಳಿಗೊಂದು ಪತ್ರಹಾಕುವೆನು. ಅದರಲ್ಲಿ ನಾನು ಬರುವಾಗ ನಿನ್ನನ್ನು ಜೋಪಾನಮಾಡಲು, ಸಂತೋಷದಲ್ಲಿಡಲು ಇನ್ನೊಬ್ಬ ಮಗಳನ್ನು ಕರೆತರುವೆನು' ಎಂದು ಬರೆಯುವೆನು.

'ಪ್ರಿಯ ಓಸ್ಕಾರ್, ಮೊದಲು ಬರೆಪುಬಿಡು. ತಡಬೇಡ'

'ಹಾಗೆಯೇ ಮಾಡುವೆನು. ಅವಳು ಯಾವ ಉತ್ತರಕೊಡಬಲ್ಲ ಳೆಂಬುದನ್ನು ನಾನು ಬಲ್ಲೆ. ಒಂದು ವೇಳೆ ಅವಳು ನಿನ್ನನ್ನು ಆದರದಿಂದ ಬರಮಾಡಿಕೊಳ್ಳದಿದ್ದರೆ—ಎಂಬ ಸಂಶಯವೇ ಬೇಡ. ನನ್ನ ಸಲುವಾಗಿ ಯಾದರೂ ನಿನ್ನನ್ನು ಅವಳು ಸ್ವೀಕರಿಸಲು ಬಾಧಕವೇನಿದೆ?'

'ಎಲ್ಲವೂ ಅಷ್ಟೆ. ಮೊದಲು ಪತ್ರ ಹಾಕು.'

'ಅವಳಿಂದ ಬನ್ನಿರೆಂದು ಉತ್ತರ ಬಂದ ಮೇಲೆ ನಾವು ಹೊರಡೋ ಣಲ್ಲವೆ?'

'ಅದರಲ್ಲೇನು ಸಂಶಯವಿದೆ? ಹೊರಟುಬಿಡೋಣ.'

'ನಾನದೆಷ್ಟು ಸುಖಿಯಾಗುವೆನು! ಇಂಥ ಸುಖವನ್ನು ಪಡೆಯು ವೆನೆಂದೇ ನಾನು ಪುಣ್ಯಜೀವಿಯಲ್ಲವೇ?' ಎಂದು ಓಸ್ಕಾರನು ಅಂದು ಕೊಳ್ಳುತ್ತ ಲಗುಬಗೆಯಿಂದ ಅಲ್ಲಿಂದ ಕಾಲ್ಕಿತ್ತಿದನು. ಜೀವುಗಾಲು ಹಾಕುತ್ತ ಹೊರಟ ಓಸ್ಕಾರನು ಕಣ್ಮರೆಯಾಗುವವರೆಗೆ ಮೋನಳು ಎವೆ ಮಿಳುಕಿಸದೆ ನೋಡುತ್ತ ನಿಂತಳು. ಒಳಹೋಗಿ ಹಾಸುಗೆಯ ಮೇಲೆ ಬಿದ್ದುಕೊಂಡಳು. ಏನು ಮಾಡಿದರೂ ಕಣ್ಣಿಗೆ ಕಣ್ಣು ಹತ್ತದು. ತನ್ನ ತಂದೆಗೆ ಒಮ್ಮೆ ಯಾವುದೋ ಪುಸ್ತಕದಿಂದ ಓದಿ ಹೇಳಿದ ವಾಕ್ಯಗಳು ಅವಳಿಗೆ ಒಮ್ಮೆಲೆ ನೆನಪಾದವು. 'ನೀನು ಕರೆದಲ್ಲಿ ನಾನು ಬರುವೆ—ನೆರಳಿ ನಂತೆ. ನಿನ್ನ ಜನರು ನನ್ನವರಾಗುವರು. ನಿನ್ನ ದೇವರು ನನ್ನ ದೇವರಾಗು ವನು' ಎಂದು ಗಟ್ಟಿಯಾಗಿ ಉಚ್ಚರಿಸಿದಳು. ಏನೋ ಒಂದು ತೆರದ ಸಮಾಧಾನವೆನಿಸಿದ್ದರಿಂದ ಅವಳಿಗೆ ನಿದ್ರೆ ಬರಲು ಕಾರಣವಾಯಿತು.

ಕೆಲವು ದಿನಗಳವರೆಗೆ ಅವಳು ಹಗಲು ಉತ್ಸಾಹದಿಂದ ಕೆಲಸ ಮಾಡುತ್ತ ಹರುಷದಿಂದ ಕಾಲಕಳೆದಳು. ರಾತ್ರಿಯಲ್ಲಿ ಮಾತ್ರ ತನ್ನ ಭಾವೀ ಜೀವಿತದ ಕಲ್ಪನಾರಾಜ್ಯದಲ್ಲಿ ಸವಿಗನಸುಗಳನ್ನು ಕಾಣುವಳು. ಓಸ್ಕಾರನ ಮನೆ, ಅವನ ತಾಯಿ ಮತ್ತು ನೆರೆಹೊರೆಯವರೊಡನೆ ತಾನು ಹೇಗೆ ಇರಬೇಕು, ಹೇಗೆ ವರ್ತಿಸಬೇಕು ಎಂದು ಮುಂತಾಗಿ ಹಲವು ತರದ ಆಲೋಚನೆಗಳಲ್ಲಿ ಮಗ್ನಳಾಗುವಳು. ಅತ್ತೆಯನ್ನು ನೆನೆದರೆ ತನ್ನ ತಾಯಿಯ ನೆನಪಾಗುತ್ತಿತ್ತು. ಅವನಿಗೂ ಮಗಳ ನೆನಪಾಗದಂತೆ ತಾನು

ಮಗಳಾಗಿ ಅವಳ ಸೇವೆಯನ್ನು ಮಾಡುತ್ತಿರುವದರಿಂದ ಅತ್ತೆಯೂ ಎಲ್ಲ ದುಃಖವನ್ನೂ ಮರೆತು ಸುಖದಿಂದಿರಬಹುದೆಂದು ಕಲ್ಪಿಸಿಕೊಳ್ಳುವಳು. ಅತ್ತೆಯ ಮನೆಗೆ ತಾನು ಬರೀ ಗೈಯಿಂದ ಹೋಗುವದು ಅಷ್ಟು ಒಳಿತಾದುದಲ್ಲವೆಂಬ ಕಲ್ಪನೆಯು ಅವಳಿಗೆ ಬಂದೊಡನೆ ಜಾನ್ ಕಾರ್ಲೆಟ್‌ನ 'ಕಾಯದೇಶೀರ' ರೀತಿಯಿಂದ ತೆಗೆದುಕೊಳ್ಳುವನೆಂಬ ಮಾತು ನೆನಪಾಗಿ ಬೆದರಿದಳು. ಎಲ್ಲ ಆಸ್ತಿಯು ಹೋಗಿ ತನ್ನ ಕೈಯಲ್ಲಿ ಏನೂ ಉಳಿಯದೆಂದು ಕೈಕಾಲುಬಿಟ್ಟಳು. ಏನಾದರೂ ಮಾಡಿ ಕೆಲಭಾಗವನ್ನಾದರೂ ಉಳುಹಿಕೊಳ್ಳುವ ಉಪಾಯಮಾಡಬೇಕೆಂದು ಒಬ್ಬ ವಕೀಲನ ಕಡೆಗೆ ತೆರಳಿ, ನಿಜವಾದ ಸಂಗತಿಯನ್ನು ಅವನಿಗರುಹಿದಳು.

ಆ ಮನುಷ್ಯನ ಹೇಳಿಕೆಯು ಸರಿಯುರುತ್ತದೆಂದು ತನಗನಿಸುತ್ತದೆಂದು ಆ ವಕೀಲನು ದೊಡ್ಡದೊಡ್ಡ ಕಾಯದೆ ಪುಸ್ತಕಗಳನ್ನು ನೋಡಿ ಸಲಹೆಯನ್ನಿತ್ತನು.

'ನಿನ್ನ ತಂದೆಯು ಸರಕಾರದವರೊಡನೆ ಈ ಕರಾರುಗಳಂತೆ ಒಪ್ಪಿಕೊಂಡಿರುವದರಿಂದ ನಿನಗೆ ಎಳ್ಳಷ್ಟೂ ಲಾಭವಿಲ್ಲ. ಈ ವ್ಯವಹಾರದಿಂದ ಲಾಭಪಡೆಯುವವರೆಂದರೆ—ಹೊಲದ ಯಜಮಾನನು ಮತ್ತು ಹೊಸ ಲಾವಣಿಹಿಡಿಯುವವನು' ಎಂದು ವಕೀಲನು ಸ್ಪಷ್ಟವಾಗಿ ಹೇಳಿದನು.

'ವಕೀಲರೇ, ನಾನಿನ್ನು ಮಾಡಬೇಕಾದರೂ ಏನು? ಅದನ್ನಾದರೂ ಹೇಳಿರಿ' ಎಂದು ಮೋನಳು ಬಿನ್ನವಿಸಿದಳು.

'ಆಸ್ತಿಯೆಲ್ಲವನ್ನೂ ಮಾರು. ಕೊಡತಕ್ಕ ಹಣವನ್ನು ಪೈಗೆಪೈ ಮುಟ್ಟಿಸು. ನಿನ್ನ ದೈವ ಅನುಕೂಲವಿದ್ದರೆ—ಏನಾದರೂ ಉಳಿಯಬಹುದು. ಅದರಿಂದ ಹೊಸದೊಂದು ಉದ್ಯೋಗವನ್ನು ಕೈಕೊಳ್ಳು. ಏನೂ ಉಳಿಯದಿದ್ದರೆ—ನಾನಾದರೂ ಏನು ಹೇಳಲಿ? ಪಾಪ! ನಿನ್ನ ದೈವ ಕೆಟ್ಟದು ಇಷ್ಟೆ.'

'ದಯಮಾಡಿ ಅಷ್ಟು ಉಪಕಾರವನ್ನು ಮಾಡಿರಿ. ಅದರ ವ್ಯವಸ್ಥೆಯನ್ನು ನೀವು ಮಾಡಲು ನನ್ನ ಒಪ್ಪಿಗೆಯಿದೆ' ಎಂದು ಹೇಳಿ ಸಮಾಧಾನವಾಗದಿದ್ದರೂ, ಹಗುರಾದ ಮನಸ್ಸಿನಿಂದ ಮನೆಯ ದಾರಿಯನ್ನು ಹಿಡಿದಳು.

ಮನೆಗೆ ಬಂದವಳೆ ಹಿಂದಿಕೊಳ್ಳುವ ಮುಂದೆ ಧರಿಸುವ ಉಡುಪನ್ನು ತೊಟ್ಟು ಕೊಟ್ಟಿಗೆಯ ಕಡೆಗೆ ಸಾಗಿದಳು. ಚಳಿಗಾಲದ ಅಸ್ತಂಗತನಾಗಲಿರುವ ಸೂರ್ಯನ ಲಂಬಾಯಮಾನವಾದ ಕಿರಣಗಳು ಕಿಡಿಕಿಯೊಳಗೆ ಪ್ರವೇಶಿಸಿ, ಇಡೀ ಕೊಟ್ಟಿಗೆಯನ್ನೆ ಪ್ರಕಾಶಿಸಿದವು. ಸೂರ್ಯನನ್ನು ನೋಡುವ ಕುತೂಹಲದಿಂದ ಅವಳು ಕಿಡಿಕಿಯೊಳಗೆ ಮುಖವನ್ನು ಹಾಕಿ ನಿಂತಿದ್ದಳು. ಅಷ್ಟರಲ್ಲಿ ಓಸ್ಕಾರನು ಬರುತ್ತಿರುವದು ಅವಳಿಗೆ ಕಾಣಿಸಿತು. ಅವನ ಮುಖವು ಕಂದಿತ್ತು; ಆದೇಕೋ ಮೋನಳಿಗೆ ಅವನ ಮುಖವನ್ನು ನೋಡಿದೊಡನೆ ಕಸಿಪಿಸಿಯಾಯಿತು. ಹುಚ್ಚುಕಳೆಯು ಸುರಿಯುತ್ತಿದ್ದ ಅವನು ನಡುಬಾಗಿದ ಮುದುಕನಂತೆ ಮೆಲ್ಲಗೆ ಬರುತ್ತಿದ್ದನು. ನಿರಾಶಾಮಯ ವಾತಾವರಣದಿಂದ ಅವನು ತೀರ ಹಣ್ಣಾಗಿದ್ದನೆಂಬುದರಲ್ಲಿ ಸಂದೇಹವಿಲ್ಲ.

'ಓಸ್ಕಾರ್, ಏನಾಗಿದೆ ನಿನಗೆ? ಅಂಥದೇನು ಬಂದಿದೆ? ಮುಖವು ಕಪ್ಪಿಟ್ಟು ಹೋಗಿದೆಯಲ್ಲ!'

'ಇಲ್ಲಿ ನೋಡು! ಆ ನಮ್ಮ ಹಂಚಿಕೆಯ ಬಗ್ಗೆ' ಎನ್ನುತ್ತ ಅವಳ ಕೈಯಲಿ ಪತ್ರವನ್ನು ಕೊಟ್ಟು ನಗಲಾರಂಭಿಸಿದನು.

'ನಿನ್ನ ತಾಯಿಯ ಪತ್ರವೇ? ಎಷ್ಟು ಬೇಗನೆ ಬಂದಿತಲ್ಲ! ಏನೆಂದಿದೆ? ನನ್ನನ್ನು ಬರಮಾಡಿಕೊಳ್ಳುವದಿಲ್ಲವೆ?' ಎಂದು ಆಶ್ಚರ್ಯಪಡುತ್ತ ಮೋನಳು ವಿಚಾರಿಸಿದಳು.

'ಮೋನಾ, ನೋಡು. ನಿನಗೆ ತಿಳಿಯಲೆಂದೇ ಬೇಕಂತೆ ಇಂಗ್ಲಿಷ ಭಾಷೆಯಲ್ಲಿ ಬರೆಸಿದ್ದಾಳೆ.'

'ಓಸ್ಕಾರ್, ನಿನ್ನ ಪತ್ರವು ನನ್ನನ್ನು ವಿಪರೀತವಾಗಿ ದಿಗಿಲುಗೊಳಿಸಿತು. ನನ್ನ ಮಗನು ಇಂಗ್ಲಿಷ ಹೆಣ್ಣನ್ನು ಮದುವೆಯಾಗುವದೆಂದರೆ ತೀರ ಹೊಲಗೆಲಸ. ಇಂಥ ಅಪರಾಧವನ್ನು ಮಾಡಲಾರನೆಂದು ನಾನು ಬಗೆದಿದ್ದೆನು. ನಿನ್ನ ತಂಗಿಯ ಜೀವಹರಣ ಮಾಡಿದ ಆ ನೀಚ ಇಂಗ್ಲಿಷ ಜಾತಿಯ ಹೆಣ್ಣಿನೊಡನೆ ಮದುವೆಯೆಂಬ ಮಾತನ್ನು ಕೇಳಿ ನನ್ನ ಹರಣವು ನಡು ನೆತ್ತಿಯಿಂದ ಹಾರಿ ಹೋಗುವಂತಾಯಿತು. ಎಂಥ ಪಾಪ

ಕ್ಕೆಳಿಸಿದೆ ನೀನು? ಇದರಂಥ ಮಹಾ ಪಾಪವು ಇನ್ನೊಂದಿಲ್ಲ' ಎಂಬ ಪತ್ರವನ್ನು ಮೋನಿಕಾ ಓದಿದಳು.

ಓಸ್ಕಾರನು ತನ್ನ ಇಂಗ್ಲಿಷ ಹೆಂಡತಿಯನ್ನು ಕರೆದುಕೊಂಡು ಬರುತ್ತೇನೆಂದು ಬರೆದರೆ ಆ ಜರ್ಮನನ್ನ ತಾಯಿಯು ಪ್ರತಿಭಟಿಸಿ, ಬರ ಗೊಡದಂತೆ ವಿಧಿಸಿದ್ದಾಳೆ. ಒಂದು ವೇಳೆ ಮಗನ ಸಲುವಾಗಿ ಅವಳನ್ನು ಸ್ವೀಕರಿಸಿದ್ದರೆ, ಸ್ವಾಭಿಮಾನಿಗಳಾದ ಜರ್ಮನ್ ಸ್ತ್ರೀಯರು ಆ ಮನೆಗೆ ಬಹಿಷ್ಕಾರ ಹಾಕದೆ ಬಿಡರು. ಜರ್ಮನಿಯಲ್ಲಿ ಇಂಗ್ಲಿಷರ ಬಗ್ಗೆ ದ್ವೇಷವು ಬೇರೂರಿದುದು ಅಷ್ಟಿಷ್ಟಲ್ಲ. ಇಂಗ್ಲಿಷ ಎಂಬ ಶಬ್ದದಿಂದಲೆ ಜರ್ಮನ್‌ರಿಗೆ ಬ್ರಹ್ಮಾಂಡ ಸಿಟ್ಟು ಬರುತ್ತಿತ್ತು. ಇಂಗ್ಲಿಷ ಜನರ ಪಾಶವೀ ಯುದ್ಧದ ರೀತಿ, ಶಾಂತಿಸ್ಥಾಪನೆಯ ಬಗ್ಗೆ ಇರುವ ಅವರ ಹೀನ ವಿಚಾರಗಳು, ಅಸಂಖ್ಯ ಜರ್ಮನ್ ಬಾಲಕರನ್ನು ನಿರ್ದಯತನದಿಂದ ಕೊಲೆಮಾಡಿದುದು, ಸಬ್ ಮರೀನುಗಳ ದಾಳಿ, ಜರ್ಮನ್ ಜೀವಂತ ವೈಮಾನಿಕರನ್ನು ಆಕಾಶದಲ್ಲಿಯೇ ಸುಟ್ಟು ಸೂರೆಗೊಳ್ಳುವದು—ಮೊದಲಾದ ಪಾಶವೀ ಕೃತ್ಯಗಳಲ್ಲದೆ ಜರ್ಮನಿ ದೇಶವನ್ನೇ ತಿರುಪೆಗೀಡುಮಾಡಿದಂಥ ಜಾತಿಯ ಜನರಿಗೆ ಕನಿಕರವುಂಟಾಗುವದು ಅಸಾಧ್ಯವಾದ ಮಾತಾಗಿತ್ತು ಜರ್ಮನಿ ಯಲ್ಲಿ. ಜರ್ಮನ್‌ನೆತ್ತರವುಳ್ಳವನಾವನೂ ತನ್ನ ದೇಶವಲ್ಲಿ ವೈರಿಗಳಾದ ಇಂಗ್ಲಿಷರಿಗೆ ಎಂದೆಂದಿಗೂ ಆಶ್ರಯವನ್ನೀಯನು. ಇಷ್ಟು ಭಯಂಕರ ಜಾತಿ ದ್ವೇಷವು ಅಲ್ಲಿ ಪ್ರಜ್ವಲಿತವಾಗಿದೆ.

'ನಾನು ಹೇಳಿರುವೆನೆಂದು ನಿನ್ನ ಇಂಗ್ಲಿಷ ರಮಣಿಗೆ ಹೇಳು: ಅವಳು ಈ ದೇಶಕ್ಕೆ ಬಂದರೆ ಯಾರೂ ಮುಟ್ಟಿಸಿಕೊಳ್ಳದ ಮಹಾರೋಗಿ ಯಂತೆ ಇರಬೇಕಾಗುವದು. ನನ್ನ ಮನೆಯಲ್ಲಂತೂ ಕಾಲಿಡಕೂಡದು. ಎಂದಿಗೂ ಸಾಧ್ಯವಿಲ್ಲ. ನನ್ನ ಮುದ್ದು ಮಗನೇ, ನಿನ್ನನ್ನು ಪ್ರೀತಿಸು ತ್ತೇನೆ. ಇಷ್ಟು ದಿನಗಳವರೆಗೆ ನೀನೆಂದು ಬಂದೀಯೆಂದು ದಾರಿಕಾಯ್ದೆ. ನನ್ನ ಶಕ್ತಿ ನಿಂತಿದೆ; ಕೈಸಾಗದ ಮುದುಕಿ. ನನ್ನ ಉಳಿದ ದಿನಗಳು ಬಹಳಿಲ್ಲ. ಇನ್ನೇನು? ಏನು ಮಾತಲಿ? ನೀನು ಇಂಗ್ಲಿಷರಾಕೆಯನ್ನು ಮದುವೆಯಾಗಿ ಬದುಕಿರುವ ಸುದ್ದಿಯನ್ನು ಕೇಳುವದಕ್ಕಿಂತಲೂ, ನೀನು

ಅಲ್ಲಿಯೇ ಸತ್ತು ಸುಡುಗಾಡು ಸೇರಿದೆಯೆಂಬ ಸುದ್ದಿಯು ಬಂದಿದ್ದರೆ ನನಗೆ ಹಿಡಿಸದಷ್ಟು ಪರುಷವಾಗುತ್ತಿತ್ತು' ಎಂದು ಪತ್ರದಲ್ಲಿ ಉಳಿದ ಭಾಗವನ್ನೂ ಓದಿ ಮೋನಳು ಮುಖವನ್ನು ಮೇಲೆ ಮಾಡಿದಳು; ಚಿಂತಾ ಕ್ರಾಂತಳಾದಳು.

ಓಸ್ಕಾರನು ಮಾತ್ರ ನಿರಾಶಾದೃಷ್ಟಿಯಿಂದ ಅವಳನ್ನು ನೋಡುತ್ತ ವಿಕಟಹಾಸ್ಯವನ್ನು ಬೀರಿದನು.

'ನಾಲ್ಕು ವರುಷಗಳ ಶಿಕ್ಷೆ ಭೋಗಿಸಿದಮೇಲೆ ಇಂಥ ಸಂದೇಶವು ತಾಯಿಯಿಂದ ಬಂದಿದೆಯೆಂದಮೇಲೆ ಜಗತ್ತಿನಲ್ಲಿ ಎಷ್ಟು ಹಿತವಿದೆ!' ಎಂದಂದು ಬಿದ್ದು ಬಿದ್ದು ನಕ್ಕನು. ಅವನ ನಗೆಯು ಹೆಚ್ಚಾಗುತ್ತಲೇ ಇತ್ತು.

'ತನ್ನ ಹಡೆದವಳು ಹೀಗೆ ಮಾಡಲಾರಳೆಂದು ಅವನು ಕನಸು-ಮನಸಿನಲ್ಲಿ ಎಣಿಸಿರಲಿಲ್ಲ. ತನ್ನ ಸಲುವಾಗಿ ಅವಳು ಏನು ಬೇಕಾದುದನ್ನು ಮಾಡಬಹುದೆಂದು ಅವನು ಭಾವಿಸಿಕೊಂಡಿದ್ದನು. ಪಾಪ! ತಾಯಿ ಯೆಂಬವಳೆ ಹಚ್ಚಿಕೊಳ್ಳದೆ ಹೋದರೆ ಇನ್ನಾರು ಹಚ್ಚಿಕೊಳ್ಳುವರು?

'ಅವಳಿಗೇನಾಗಿರಬಹುದು? ಪಾಪಮಯವಾದ ಯುದ್ಧವು ಅವಳ ಅಂತಃಕರಣವನ್ನೆಲ್ಲ ಕಸಿದುಕೊಂಡುಬಿಟ್ಟಿತೇ? ಜರ್ಮನ್‌ರೂ ಸಹ-ಎಲ್ಲರೂ ಹುಚ್ಚರಾದರೆ? ಜರ್ಮನ್ ಬಾಲಕರ ಕೊಲೆಯಂತೆ! ಮುಣು ಗಿದ ನಾವಿಕರ ಮರಣವಂತೆ! ಜೀವಂತ ವೈಮಾನಿಕರ ದಹನವಂತೆ! ಏನಿದೇನಿದು! ಎಂಥ ಸೇಡು! ದೇವರೇ, ಇಡಿಕಿಡಿ ದೇಶವೇ ಮರುಳು ಗೊಂಡಿದೆಯೇ?' ಎಂದು ಒಟಗುಡುತ್ತ, ಕೈ ತಟ್ಟುತ್ತ, ಕೇಕೆ ಹೊಡೆ ಯುತ್ತ ನಗುತ್ತಲೇ ಇದ್ದನು.

ಮೋನಳು ಅವನ ಈ ಸ್ಥಿತಿಯನ್ನು ನೋಡಿ ಹೌಹಾರಿದಳು. ಅವನನ್ನು ಸಮಾಧಾನ ಪಡಿಸಲು ಎಷ್ಟೋ ಪ್ರಯತ್ನಿಸಿದಳು. ಆದರೂ ಅವನು ಹಾಸ್ಯಮಗ್ನತೆಯಿಂದ ಹೊರಬರಲಿಲ್ಲ. ಅವಳಿಗೆ ಮುಂದೇನು ಮಾಡಬೇಕೆಂಬದು ತೋಳೆಯಲಿಲ್ಲ; ದಿಂಗ್ಮೂಢಳಂತೆ ನಿಂತಳು.

'ಅವಳು ಮುದುಕಿಯಂತೆ! ಹೆಚ್ಚು ಕಾಲ ಬದುಕಲಾರಳಂತೆ!

ನನಗೆ ಬೇಕಾದವಳನ್ನು ನಾನು ಕೈ ಹಿಡಿದು, ಮನೆಗೆ ಕರೆದೊಯ್ಯ್ಯ ಬೇಕೆಂದರೆ...... ನಾನು ಸತ್ತಿದ್ದರೆ ಹ..ರು..ಷ..ವಂತೆ....' ಎಂದು ಮುಂತಾಗಿ ಮಾತಾಡಿಯೇ ಮಾತಾಡಿದನು.

ಕಡೆಗೆ ನಗೆಯು ಹೊಗೆಯಾಗಿ ಓಸ್ಕಾರನು ಬಿಕ್ಕಿ ಬಿಕ್ಕಿ ಅಳತೊಡ ಗಿದನು. ಮಾತುಗಳು ಎಲ್ಲಿಯೋ ಅಡಗಿದವು. ಕಣ್ಣೀರು ಕಾಲುವೆಯಾಗಿ ಹರಿಯುತ್ತಿತ್ತು. ಮೋನಳ ಕುತ್ತಿಗೆಯ ನರಗಳೂ ಉಬ್ಬಿದವು. ಮಾತ ನಾಡಲು ಬಾಯಿ ಬಾರದಾಯಿತು. ಧಾರೆಯಾಗಿ ಹರಿಯುವ ಕಂಬನಿ ಗಳನ್ನು ಒರಿಸಿಕೊಂಡು, ದುಃಖವನ್ನು ಹತ್ತಿಕ್ಕಿ, 'ಓಸ್ಕಾರ್, ಈ ಎಲ್ಲ ತಪ್ಪು ನನ್ನದು. ಮಗನಿಗೆ ತಾಯಿ ಎರವಾಗುವಂತೆ ಮಾಡಿದವಳು ನಾನು; ಇಬ್ಬರಿಗೂ ಇದಿಯಾಗಿ ನಡುವೆ ಬಂದೆ. ನನ್ನನ್ನು ಬಿಟ್ಟು ನೀನು ಮನೆಗೆ ಹೋಗು. ನಿನ್ನ ದೇಶ, ನಿನ್ನ ತಾಯಿ, ಎಲ್ಲವೂ ನಿನಗೆ ದೊರೆಯುವದು' ಎಂದು ಮೋನಳು ಒಂದೆ ಉಸಿರಿನಿಂದ ತಡವರಿಸುತ್ತ ಮಾತನಾಡಿದಳು.

'ದೇ..ಶ.., ತಾ..ಯಿ.. ನ..ನ..ಗೆ? ನನಗೆ ದೇಶವಿಲ್ಲ, ತಾಯಿಯಿಲ್ಲ. ಅವರಿಗಾಗಿ ಮನೆಗೆ ಹೋಗಬೇಕೆ? ಇಲ್ಲ, ನನಗಾರೂ ಇಲ್ಲ–ಈ ಜಗತ್ತಿನಲ್ಲಿ' ಎಂದು ಓಸ್ಕಾರನು ಮುಖವನ್ನು ಮೇಲಕ್ಕೆತ್ತಿ ಮಾತನಾಡಿದನು. ಅವನಿಗೆ ಅಲ್ಲಿ ಹೆಚ್ಚು ಹೊತ್ತು ನಿಲ್ಲುವದಾಗದೆ ಕಾಲ್ತೆಗೆದನು. ಮೋನಳು ಅವನನ್ನು ಹಿಡಿದು ನಿಲ್ಲಿಸಬೇಕೆಂದು ಕೈ ಮುಂದೆ ಚಾಚುವಷ್ಟರಲ್ಲಿ ಅವನು ದೂರ ಹೋಗಿಯೇ ಬಿಟ್ಟಿದ್ದನು.

ಓಸ್ಕಾರನ ತಾಯಿಯು ಮೋನಳನ್ನು ಸ್ವೀಕರಿಸದ್ದರಿಂದ ಜರ್ಮ ನಿಯೂ ಅವರಿಬ್ಬರ ಪಾಲಿಗೆ ಇಲ್ಲದಾಯಿತು. ಓಸ್ಕಾರ್ ಜರ್ಮನ್ನನು. ಮೋನಳು ಇಂಗ್ಲಿಷಳು. ಈ ಭಿನ್ನ ಜಾತಿಯ ಸಂಗಮವಾಯಿತು, ಎರಡೂ ದೇಶದವರು ಯುದ್ಧದಲ್ಲಿ ಪ್ರತಿಸ್ಪರ್ಧಿಯಾಗಿ ಕಾದಾಡಿದುವು. ಆದರಿಂದ ದೇಶದ್ವೇಷವು ಎರಡೂ ಜನಾಂಗಗಳಲ್ಲಿ ಕೋಲಾಹಲವನ್ನೆ ಬ್ಬಿಸಿ ತಾಂಡವ ನೃತ್ಯವನ್ನಾರಂಭಿಸಿದೆ. ಇಂಥ ಉರಿಯುತ್ತಿರುವ ಕಾಲ ದಲ್ಲಿ, ಬೆಂಕಿಯಲ್ಲಿ ಹುಲ್ಲನ್ನು ಹಾಕಿದಂತೆ ಅವರಿಬ್ಬರ ಮದುವೆಯಾಯಿತು. ಈ ಅಕ್ಷಮ್ಯ ಅಪರಾಧವಾದ ಸಂಕರ ದೋಷವು ಸಾಂಕ್ರಾಮಿಕ ರೋಗ

ಪ್ರದೇಶದಿಂದ ಬಂದ ಜನರಿಗೆ ಎಲ್ಲೆಲ್ಲಿಯೂ ಸ್ಥಳ ಸಿಗದ ಹಾಗೆ, ಇವರಿಬ್ಬರೂ ಬಹಿಷ್ಕೃತರೆಂದು ಜಗಜ್ಜಾಹೀರಾದ್ದರಿಂದ ಅವರಿಗೆ ಇಡಿ ಜಗತ್ತಿನಲ್ಲಿ ಬಾಳಿ ಬದುಕಲು ಸ್ಥಳವೇ ಸಿಕ್ಕದಾಗಿದೆ.

'ಓಸ್ಕಾರಾ! ಎಂಥ ವಿಪತ್ತಿಗೀಡಾದೆವು? ಎಂಥ ದೈವ ನಮ್ಮದು' ಎಂದು ಮೋನಳು ಬಿಸುಸುಯ್ದಳು.

---

# ನಿರಾಧಾರ

೪-೫ನೆಯ ಕಂಪೌಂಡಿನೊಳಗಿನ ಜನರೂ, ಮುಕ್ಕಾಲುಪಾಲು ಕಾವಲುಗಾರರೂ, ಎಷ್ಟೋ ಅಧಿಕಾರಿಗಳೂ ಹೋಗಿಬಿಟ್ಟಿರುವರು; ಕ್ಯಾಂಪು ಹಾಳು ಹಾಳು ಸುರಿಯುವದು. ಈ ಸಮಯದಲ್ಲಿ ಕ್ಯಾಂಪಿನೊಳಗಿನ ಬಿದಿರು, ಚಾಪಿ, ಕಾತಿ, ತಗಡು, ಇಲೆಕ್ಟ್ರಿಕ್ ಸಾಮಾನು ಮೊದಲಾದ ಎಲ್ಲ ವಸ್ತುಗಳನ್ನು ಕೊಂಡುಕೊಳ್ಳಲು ಹೊಸಬನೊಬ್ಬನು ಪ್ರವೇಶಿಸಿದನು.

ಮೊದಲು ಅವನು ಕಟ್ಟಿಗೆಯ ಇಮಾರತುಗಳಿದ್ದ ಭಾಗವನ್ನು ನೋಡಿಕೊಂಡು ಒಕ್ಕಲುಮನೆಯ ಹತ್ತಿರಕ್ಕೆ ಬಂದನು. ಎತ್ತರವಾದ ಸ್ಥಳದ ಮೇಲೆ ನಿಂತುಕೊಂಡು, ಇಡಿಯ ಕ್ಯಾಂಪನ್ನು ನಿರೀಕ್ಷಿಸುತ್ತಲಿದ್ದ ಅವನನ್ನು ಕಂಡು, ಮೋನಳು ತನ್ನ ಕೊಟ್ಟಿಗೆಯ ಬಾಗಿಲದ ಹೊಸ್ತಿಲದ ಮೇಲೆ ಬಂದು ನಿಂತಳು.

ಅವನೊಬ್ಬ ಅಮೇರಿಕನ್ನನು. ನಗುಮುಖದವನು. ಮನಬಿಚ್ಚಿ ಮಾತಾಡುವ ಮನುಷ್ಯ. ತುಟಿಯಲ್ಲಿಯೇ ನಗುತ್ತ ಅವನು ಸಂಭಾಷಣವನ್ನು ಆರಂಭಿಸುವ ನೆವದಿಂದ 'ಈ ಒಕ್ಕಲುಮನೆಯು ಮಾರಾಟಕ್ಕಿದೆಯಷ್ಟೇ' ಎಂದು ಮೋನಳನ್ನು ವಿಚಾರಿಸಿದನು.

'ಈ ವಿಷಯವಾಗಿ ಈ ಹೊಲದ ಯಜಮಾನನನ್ನು ವಿಚಾರಿಸಬೇಕು' ಎಂದು ಮೋನಳು ಉತ್ತರವಿತ್ತಳು.

'ನಿನಗೆ ಗೊತ್ತಿಲ್ಲವೇ? ನೀನು ಈ ಹೊಲದ ಲಾವಣಿಯನ್ನು ಹಿಡಿದಿಲ್ಲವೇ?'

'ಹೌದು. ನಾನೀಗ ಇದನ್ನು ಬಿಟ್ಟುಬಿಡುವವಳು. ಅದೇಕೆ ಬಿಟ್ಟಂತಾಗಿದೆ.'

'ಓಹೋ, ನನಗೀಗ ನೆನಪಾಯಿತು! ನಿನ್ನ ವಿಷಯವಾಗಿ ಏನೇನೋ ಸುದ್ದಿಯು ನನ್ನ ಕಿವಿಯವರೆಗೂ ಬಂದಿದೆ. ಇದನ್ನು ಬಿಟ್ಟ ಮೇಲೆ, ಎಲ್ಲಿಗೆ ಹೋಗಬೇಕೆಂದಿರುವಿ?'

'ರಾಯರೇ, ಇನ್ನೂ ನಾನು ನಿಶ್ಚಯಕ್ಕೆ ಬಂದಿಲ್ಲ.'

ಕಾಲಿನಿಂದ ತಲೆಯವರೆಗೆ ಅಳತೆ ತೆಗೆದುಕೊಳ್ಳುವವರಂತೆ ಅವಳನ್ನು ದಿಟ್ಟಿಸಿ ನೋಡಿ, 'ಹುಡುಗಿಯೇ, ನಮ್ಮ ದೇಶಕ್ಕೆ ಬಂದುಬಿಡು. ಹೀಗೆಯೇ ಈಗಾಗಲೆ ಕೆಲವು ಹೆಂಗಸರು ಬಂದು ನೆಲೆಸಿದ್ದಾರೆ. ಅವರಂತೆ ನೀನೂ ಒಬ್ಬಳಾಗುವಿ. ಇನ್ನೂ ಹೆಚ್ಚು ಜನರಿಗೆ ನಮ್ಮ ದೇಶದಲ್ಲಿ ಆಶ್ರಯ ದೊರೆಯಬಹುದು' ಎಂದು ಅವನು ನಗುನಗುತ್ತ ನುಡಿದನು.

ಮೋನಳು ಬೆಚ್ಚಿಬಿದ್ದಳು. 'ಅಮೇರಿಕಾ' ಎಂಬ ಶಬ್ದವು ಕಿವಿಯ ಮೇಲೆ ಬಿದ್ದೊಡನೆ, ಅವಳಿಗೆ ಪ್ರತಿಭೆಯ ದರ್ಶನವಾದಂತೆನಿಸಿತು. 'ಅಮೇರಿಕಾ! ಎಲ್ಲ ಜನಾಂಗಗಳನ್ನು ಕರಗಿಸುವ ಕಡಾಯಿ!' (Melting pot of nations.) ಎಲ್ಲ ಜಾತಿಯ ಜನರೂ ಅಲ್ಲಿ ವಾಸವಾಗಿದ್ದಾರೆ. ಅವರಿಬ್ಬರೂ ಅಲ್ಲಿ ಹೋಗಿ ನೆಲಸಿದರೆ, ಸುಖಸಮಾಧಾನದಿಂದ ಕಾಲಹರಣಮಾಡಬಹುದು.

ರಾತ್ರಿಯಲ್ಲಿ ಓಸ್ಕಾರನು ಬಂದಾಗ, ಮೋನಳು ಆ ಹೊಸಬನು ಆಡಿದ ಮಾತುಗಳನ್ನು ಅವನಿಗೆ ತಿಳಿಯಪಡಿಸಿದಳು ಅವನಿಗೂ ಒಂದು ಆಶಾಕಿರಣವು ಮುಸುಕುಮುಸುಕಾಗಿ ಕಂಡಿತು. ಮನೋವೇದನೆಯಿಂದ ಬಳಲುತ್ತಿದ್ದ ಅವನಲ್ಲಿ ಒಂದು ತರದ ಉತ್ಸಾಹವು ತಲೆದೋರಿತು.

'ನಾವು ಯಾಕೆ ಹೋಗಬಾರದು? ಹೋಗಲು ನಮಗಿರುವ ತೊಡಕುಗಳಾದರೂ ಏನು? ಆ ಸ್ವತಂತ್ರ ರಾಷ್ಟ್ರಕ್ಕೆ! ನಾವೇಕೆ ಹೋಗಬಾರದು ಹೇಳು? ಈ ಯುರೋಪಿನಲ್ಲಿ ಎಲ್ಲಿಯೂ ನಮಗಿರಲು

ಸ್ಥಳ ಸಿಕ್ಕದಿರುವಾಗ ನಾವು ಅಲ್ಲಿಗೆ ಹೋದರೆ ಸುಖ–ಸಮಾಧಾನಗಳು ದೊರೆಯಲಾರವೆ? ಯುರೋಪದ ದ್ವೇಷಮಯ ಜೀವನವನ್ನು ಮರೆತು, ನಾವು ಅಲ್ಲಿ ಸ್ವಚ್ಛಂದವಾಗಿ ವಾಸಿಸಬಲ್ಲೆವು' ಎಂದು ಅವನು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದನು.

ಅಮೇರಿಕೆಯಲ್ಲಿ ನೆಲೆಸಲು ಅಲ್ಲಿಯವರ ಅಪ್ಪಣೆ ದೊರೆಯುವದು ಸಹಸಾ ಸಾಧ್ಯವಾಗದು. ತುರಂಗದಲ್ಲಿ ಬಿದ್ದುಬಂದವರಿಗಲ್ಲಿ ವಾಸಿಸಲು ಅಪ್ಪಣೆಯು ಸಿಗಲಾರದೆಂದು ಅವನು ಕೇಳಿದ್ದನು. ಅವನು ನಾಲ್ಕು ವರುಷಗಳವರೆಗೆ ಬಂಧಿತನಾಗಿ ಇರಲಿಲ್ಲವೆ? ಅಂಥವನಿಗೆ ಅಮೇರಿಕೆಯಲ್ಲಿ ಆಶ್ರಯವು ದೊರೆಯುವದೆ? ಆದುದರಿಂದ ತನಗಿಂತ ಹೆಚ್ಚು ಬಲ್ಲವರಾದ ಪಾದ್ರಿಯನ್ನು ವಿಚಾರಿಸಬೇಕೆಂದು ಓಸ್ಕಾರನು ನಿಶ್ಚಯಿಸಿದನು.

ಮರುದಿನ ರಾತ್ರಿ ವಾಡಿಕೆಯಂತೆ ಅವನು ಮೋನಳ ಕಡೆಗೆ ಬಂದನು; ನಿನ್ನೆಗಿಂತಲೂ ಮುಖವು ಹೆಚ್ಚು ಕಳೆಗಟ್ಟಿತ್ತು.

'ಮೋನಾ, ಸಾಧ್ಯವಾಗುವಂತಿದೆ. ಯಾಕಂದರೆ ಅಮೇರಿಕೆಯ ಕಾಯದೆಗಳ ಪ್ರಕಾರ ಈ ರೀತಿಯ ಬಂಧನವು ತುರಂಗವಾಸವೆಂದು ಗಣಿಸಲ್ಪಡುವದಿಲ್ಲಂತೆ. ಅಂದಮೇಲೆ ನನಗೆ ಯಾವ ತೊಂದರೆಗಳೂ ಬರವು' ಎಂದು ಹುರಿದುಂಬಿದವನಾಗಿ ಮೋನಳಿಗೆ ಹೇಳಿದನು.

ಆದರೂ ಇನ್ನೊಂದು ತೊಂದರೆಯಿದೆ. ಅದೇನೆಂದರೆ–ಅಮೇರಿಕೆಗೆ ಬರುವವರ ಹತ್ತಿರ ಆ ದೇಶಕ್ಕೆ ಭಾರವಾಗದಷ್ಟು ಹಣವು ಮಾತ್ರ ಇದ್ದೇ ತೀರಬೇಕೆಂಬ ಇನ್ನೊಂದು ನಿಯಮವಿದೆ. ಅದಕ್ಕನುಸಾರವಾಗಿ ಓಸ್ಕಾರ್–ಮೋನರು ಹೋಗಲು ಅವರ ಹತ್ತಿರ ಹಣವು ಬೇಕಲ್ಲವೆ?

'ಬಹಳೇನೂ ಅಲ್ಲ; ಆದರೆ ನನ್ನ ಹತ್ತಿರವಿರುವದೆ ತೀರ ಕಡಿಮೆಯಿದೆ. ನಾನು ಸ್ವತಂತ್ರನಾಗಿದ್ದುದಾದರೆ ಇಷ್ಟು ಅವಧಿಯಲ್ಲಿ ಏನಿಲ್ಲೆಂದರೂ ೪೦೦೦ ಪೌಂಡುಗಳನ್ನು ಗಳಿಸಬಹುದಾಗಿತ್ತು. ಆದರೇನು ಮಾಡುವದು? ಈ ಕ್ಯಾಂಪನ್ನು ಬಿಟ್ಟು ಹೋಗುವ ಮುಂದೆ ನನ್ನ ಸಂಗ್ರಹವೆಂದು ೫೦ ಪೌಂಡು ಮಾತ್ರ ನನ್ನ ಕೈಗೆ ಬರಬಹುದು.'

ಮೋನಳ ಸಂತೋಷಕ್ಕೆ ಮಿತಿಯಿಲ್ಲದಾಯಿತು. ತಾನೇನಾದರೂ

ಮಾಡಿ ತನಗೆ ಬೇಕಾದಷ್ಟು ಹಣವನ್ನು ಸಂಗ್ರಹಿಸಬಹುದು ಎಂದು ಮೋನಳು ಎಣಿಕೆಹಾಕಹತ್ತಿದಳು. ‘ಅದೇನು ಅಷ್ಟು ತೊಂದರೆಯಿಲ್ಲ. ನನ್ನ ಇಡಿ ಆಸ್ತಿಯ ಲಿಲಾವು ಬೇಗನೆ ಆಗುವ ಸಂಭವವಿದೆ. ಅಂಥ ಸಂದರ್ಭವೇ ಒದಗಿದೆ. ಆ ಬಂದ ಹಣದಿಂದ ನಾನು ಕೊಡತಕ್ಕ ಎಲ್ಲ ಸಾಲವನ್ನು ತೀರಿಸಿದರೂ, ನನ್ನ ಹತ್ತಿರ ಇನ್ನೂ ಸಾಕಷ್ಟು—ನಮಗೆ ಬೇಕಾಗುವಷ್ಟು ಹಣವು ಉಳಿಯುವದು. ಆ ಬಗ್ಗೆ ನೀನು ಚಿಂತಿಸ ಕೂಡದು’ ಎಂದು ಹೇಳಿ ಮೋನಳು ಓಸ್ಕಾರಸಿಗೆ ಧೈರ್ಯವನ್ನು ಕೊಟ್ಟಳು.

ಲಿಲಾವಿನ ಮುನ್ನಾದಿನ ಮೋನಳು ತನ್ನದೆಂಬುವ ಎಲ್ಲ ಆಸ್ತಿಯನ್ನು ಒತ್ತಟ್ಟಿಗಿಟ್ಟಳು. ಅವಳೊಂದು ಮುದ್ದುಮುದ್ದಾದ ಹೋರಿಯನ್ನು ಸಾಕಿದ್ದಳು. ಚಳಿಗಾಲದಲ್ಲಿ ವಾರಕ್ಕೆರಡು ಸಲ ಅದಕ್ಕೆ ಹಿಂಡಿ, ನುಚ್ಚುನುರಿ ಬಹು ಅಕ್ಕರೆಯಿಂದ ತಿನಿಸುತ್ತಿದ್ದಳು. ಮರಡಿಯ ಮೇಲಿರುವ ದನದಮನೆಯಲ್ಲಿ ಅದೊಂದನ್ನೇ ಕಟ್ಟುತ್ತಿದ್ದಳು. ಅದನ್ನೂ ಈ ಸ್ಥಳಕ್ಕೆ ತರಬೇಕೆಂದು ಅವಳು ಹಾಡುತ್ತ ಹಾಡುತ್ತ ಮರಡಿಯನ್ನು ಏರುತ್ತಿದ್ದಳು. ಏನೋ ಒಂದು ಆಶಾಕಿರಣವು ಅವಳಿಗೆ ಜೀವನದಲ್ಲಿ ಉತ್ಸಾಹವನ್ನು ತುಂಬಿತ್ತು. ಅವಳ ಕಣ್ಣೆದಿರು ಸುಂದರ ಭವಿಷ್ಯತ್ತು ಕಂಗೊಳಿಸಹತ್ತಿದೆ. ಆದುದರಿಂದ ಅವಳು ಉತ್ಸಾಹದಿಂದ ಸಾಗಿದ್ದಳು.

ಅವಳು ಮರಡಿಯನ್ನೇರುತ್ತ ‘ಕಾರಿನ್ಸಫಾಲಿ’ ಗೋಪುರವನ್ನು ಮುಟ್ಟಿದಳೋ ಇಲ್ಲವೋ ಅಷ್ಟರಲ್ಲಿ ಅವಳಿಗೆ ಡುರುಕಿ ಹಾಕುತ್ತಿರುವ ಸಪ್ಪಳವು ಕೇಳಿಸಿತು. ಮೂರು ಹೋರಿಗಳ ಕಾದಾಟವು ಅವಳ ಕಣ್ಣಿಗೆ ಬಿದ್ದಿತು. ಅದರಲ್ಲಿ ಒಂದು ಇನ್ನೂ ಹಾಲ್ಹಲ್ಲಿನದು; ಬಿಳಿ ಬಣ್ಣ. ಅದೇ ಮೋನಳದು. ಉಳಿದವೆರಡು ಹೋರಿಗಳು ಬಾಯ್ಗೂಡಿ ಎರಡು—ಮೂರು ವರುಷವಾಗಿರಬೇಕು. ಹುಬ್ಬೂ ಇದ್ದವು; ಕಪ್ಪು ಬಣ್ಣ. ಕೋಡುಗಳಲ್ಲಿ ಕೋಡಣಸು. ಮೂಗಿನಲ್ಲಿ ಮೂಗುದಾರ. ಆವೆರಡೂ ಹೋರಿಗಳ ಗುರುತು ಅವಳಿಗೆ ಸಿಗಲಿಲ್ಲ. ಎಲ್ಲಿಯೋ ನೋಡಿದುದರ ನೆನಪು ಮಾತ್ರ ಕಡೆಗೆ ಜಾನ್‌ಕಾರ್ಲೆಟ್‌ನವು ಎಂಬದನ್ನು ಗುರುತು ಮಾಡಿಕೊಟ್ಟಿತು.

ಬೇಲಿಯನ್ನು ಜಿಗಿದು ಬಂದು ಈ ಬಳಿಕ ಹೋರಿಯೊಡನೆ ಕಾಲ್ಕೆದರಿ, ಬಾಲ ನಿಗುರಿಸಿ, ಡುರುಕಿ ಹಾಕುತ್ತ ಆ ಎರಡೂ ಹೋರಿಗಳು ಥಕ್ಕೆಯ ನೋಗುವಂತೆ ಅದನ್ನು ಇರಿಯುತ್ತಿದ್ದುವು.

ಕಾದಾಟವು ಹೆದರಿಕೆ ಬರುವಷ್ಟು ಭೀಕರವಾಗಿತ್ತು. ಚಿಕ್ಕ ಹೋರಿಯ ಮೈಯೆಲ್ಲ ರಕ್ತ ಬಂಬಾಳವಾಗಿತ್ತು. ಆ ಎರಡೂ ಹೋರಿಗಳ ಇರಿತದಿಂದ ತಪ್ಪಿಸಿಕೊಳ್ಳಲು ಅದೆಷ್ಟೋ ಯತ್ನಿಸಿತು. ಗೋಪುರದ ಸುತ್ತಲಿರುವ ಸ್ಮಶಾನದ ಗೋಡೆಯಾಚೆಗೆ ಮೋನಳ ಪ್ರೀತಿಯ ಹೋರಿಯು ಜೀವದ ಹಂಗಿಲ್ಲದೆ ಜಿಗಿಯಿತು. ಅಲ್ಲಿ ಮುಂದೆ ಸಮನಾದ ನೆಲವೇ ಇಲ್ಲ. ಕಡಿದಾದ ಭೂಮಿ; ಅದರ ತುದಿಗೆ ಅಘಾಟವಾದ ಸಮುದ್ರ. ಎರಡೂ ಬದಿಗೆ ಎತ್ತರವಾದ ಬಂಡೆಗಲ್ಲುಗಳು. ಆದರೂ ಆ ಎರಡೂ ಹೋರಿಗಳು ಅದರ ಬೆನ್ನುಹತ್ತಿ ಯಾವ ಕಡೆಗೂ ಹೋಗದಂತೆ ಕಾಯ್ದಿದ್ದುವು. ಅದಕ್ಕೆ ಎಲ್ಲಿಯೂ ಹೋಗದಂತೆ ದಾರಿಯು ಕಟ್ಟಾಯಿತು. ಬಾಯಿಂದ ಉಸಿರು ಒಂದೇ ಸಮನೆ ಹೊರಡುತ್ತಿದ್ದರಿಂದ ಅದರ ಹೊಟ್ಟೆ ಕುಟ್ಟು ಹಿಡಿದಂತಾಗಿ ಒಂದು ತುಸು ಒತ್ತಟ್ಟಿಗೆ ನಿಂತಿತು; ಸುತ್ತೂ ಕಡೆಗೆ ಕಣ್ಣರಳಿಸಿ ನೋಡಿತು. ಬೇರಿನ್ನಾವ ದಾರಿಯು ತನಗಿಲ್ಲೆಂಬ ನಿರಾಶಾವೃಷ್ಟಿಯಿಂದ ದೊಡ್ಡದೊಂದು ಡುರುಕಿಯನ್ನು ಹಾಕಿ ಕಡಿದಾದ ಭೂಮಿಯಲ್ಲಿ ಅಂಟರುಗಾಲಿನಿಂದ ಜಿಗಿಯುತ್ತ ಕೊನೆಗೆ ಸಮುದ್ರದೊಳಗೆ ಹಾರಿಕೊಂಡಿತು. ಅದು ಮಾಯವಾಯಿತೆಂದು ಬಗೆದೋ ಏನೋ ಅನ್ನುವಂತೆ ಅವೆರಡೂ ಮೇಯತೊಡಗಿದವು.

ಕಾದಾಟವನ್ನು ಕಣ್ಮುಟ್ಟಿ ನೋಡಿದಳು. ಪಾಪ! ಮಾಡುವಳೇನು? ಆ ಭೀಕರ ದೃಶ್ಯವನ್ನು ಕಂಡು ಅವಳು ನಡುಗಿದಳು. ಹೋರಿಯಂತೂ ಕೈಬಿಟ್ಟು ಹೋಯಿತಲ್ಲಾ! ಒಂದು ದೀರ್ಘವಾದ ನಿಟ್ಟುಸಿರು ಹಾಕಿದಳು. ಅವಳು ಅದನ್ನೆಷ್ಟು ಮಮತೆಯಿಂದ ಸಾಕಿದ್ದಳು! ಅದರ ಮರಣದಿಂದ ಅವಳಿಗೆ ಬಲು ದುಃಖವಾಯಿತು. ಅಳು ಮೊಗದವಳಾಗಿ ಮರಡಿಯನ್ನು ಇಳಿಯುತ್ತಿದ್ದಳು. ಅಷ್ಟರಲ್ಲಿ ಅವಳ ಬೆನ್ನಹಿಂದೆಯೇ ಓಸ್ಕಾರನೂ ಬರತೊಡಗಿದ್ದನು. ಗೋಪುರದ ಚಪ್ಪರಕ್ಕೆ ಜೋಡಿಸಿದ

ಇಲೆಕ್ಟ್ರಿಕ್ ತಂತಿಗಳನ್ನು ಅವನು ಕಿತ್ತುಹಾಕುತ್ತಿದ್ದನು. ಅಲ್ಲಿಂದಲೇ ಅವನಿಗೆ ಇದೆಲ್ಲ ಅನರ್ಥವು ಕಾಣಿಸಿತ್ತು.

'ಪಶುಗಳಲ್ಲಿಯೂ ಕೂಡ ಎಷ್ಟು ಕ್ರೂರತನವಿದೆ! ಎಷ್ಟೊಂದು ಹೇಡಿತನವಿದೆ!' ಹೌದು ಮಾನವರಲ್ಲಿ ಕಂಡಬರುವದಂತೂ ಆಶ್ಚರ್ಯದ ಮಾತಲ್ಲ' ಎಂದು ಓಸ್ಕಾರನು ಹಲ್ಲು ಕಡಿಯುತ್ತ ನುಡಿದನು.

ಮೋನಳು ಅವನನ್ನು ಹುಳಹುಳನೆ ನೋಡಿದಳು. ಅವರಿಬ್ಬರೂ ಜೊತೆಯಾಗಿಯೇ ಮರಡಿಯನ್ನು ಇಳಿಯುತ್ತ, ಚಕಾರ ಶಬ್ದವನ್ನಾಡದೆ ಮನೆಯನ್ನು ಮುಟ್ಟಿದರು.

ಕೊನೆಗೆ ಲಿಲಾವು ಆಗುವ ದಿನ ಬೆಳಗಿತು. ಕ್ಯಾಂಪು ಪೂರ್ಣವಾಗಿ ಕಿತ್ತಲ್ಪಟ್ಟಿರಲಿಲ್ಲ; ಆದರೂ ಲಿಲಾವು ಒಕ್ಕಲು ಮನೆಯಲ್ಲಿಯೇ ಜರುಗಲೆಂದು ಕಮಾಂಡಂಟನು ಅಪ್ಪಣೆಕೊಟ್ಟಿದ್ದನು. ಅವನೂ ಅಂದೇ ಹೊರಡುವವನು. ಲಿಲಾವೇ ಅವನ ಕೊನೆಯ ಕೆಲಸ. ಮೋನಳ ಮನೆಯ ಮುಂದಿನ ದಾರಿಯಿಂದಲೇ ಅಧಿಕಾರಸ್ಥನ ಉಡುಪು ಧರಿಸಿಕೊಂಡು ಮೋಟಾರಿನಲ್ಲಿ ಕುಳಿತು ಹೊರಟಿದ್ದನು. ಅವಳನ್ನು ಕಂಡೊಡನೆ ಟೊಪ್ಪಿಗೆಯನ್ನು ತೆಗೆದನು. ಓತಪ್ರೋತ ಇಂಗ್ಲಿಷ ಮನುಷ್ಯನಲ್ಲವೇ ಅವನು? ಮೋನಳೂ ಅವನಿಗೆ ತಿರುಗಿ ವಂದನೆಗಳನ್ನ ರ್ಪಿಸಿದಳು.

೧೧ ಗಂಟೆಯ ಸುಮಾರಿಗೆ ಒಕ್ಕಲುಮನೆಯಲ್ಲಿ ಗಡಿಬಿಡಿಯೇ ಗಡಿಬಿಡಿಯು. ಸುತ್ತಲಿನ ಒಕ್ಕಲಿಗರೂ, ಜಮೀನುದಾರರೂ, ಬೇರೆ ಉದ್ಯೋಗಸ್ಥರೂ ಬಂದಿದ್ದರು. ಲಿಲಾವಾಗುವ ಎಲ್ಲ ಸಾಮಾನುಗಳನ್ನು ಲಿಲಾವಿನ ಸ್ಥಳದಲ್ಲಿ ತಂದಿಡಲು ಕಾವಲುಗಾರರೂ ತೊಡಗಿರುವರು. ಕುರಿಗಳು 'ಬ್ಯಾ' ಎಂದು, ಕರಗಳು 'ಅಂಬಾ' ಎಂದು, ಹೋರಿಗಳು 'ಡುರ್' ಎಂದು, ಹಸುಗಳೂ 'ಹಂಬಾ' ಎನ್ನುವ ಕೂಗು ಕೇಳುತ್ತಿತ್ತು ಮೋನಳಿಗೆ ಕರ್ಣಕಟುವಾಗಿ. ಆ ದೃಶ್ಯವನ್ನು ನೋಡಬಾರದೆಂದು ಒಳಗೆ ಕುಳಿತವಳು ಹೊರಗೆ ಬರಲಿಲ್ಲ. ಆ ಸಪ್ಪಳವು ಕೇಳಬಾರದೆಂದು ಕಿವಿ ಮುಚ್ಚಿಕೊಂಡು ಕುಳಿತಳು. ಹೊರಗೆ ನಡೆದ ಲಿಲಾವಿನ ಕಡೆಗೆ ಅವಳ ಲಕ್ಷ್ಯವಿರಲಿಲ್ಲ. ಲೇವಾದೇವಿ ತೀರಿ, ಹಣವು ಸಿಕ್ಕುವ ಸಂಭವವಿರಲಿಲ್ಲ.

ಗಲಿಬಿಲಿಯು ಒಮ್ಮೆಲೆ ನಿಂತಿತು. ವಕೀಲನು, ಲಿಲಾವುದಾರನು ಮತ್ತು ಅವನ ಕಾರಕೂನನು, ಅವರ ಹಿಂದೆ ಅದೆಷ್ಟೋ ಜನರು ಬರುತ್ತಿರುವದು ಕಂಡದ್ದರಿಂದ ಈ ಮೊದಲು ನೆರೆದ ಜನರು ಬಾಯಿಮುಚ್ಚಿದರು. ಲಿಲಾವು ಹಿಡಿಯಲು ಬಂದವರ ಸಮೂಹದಲ್ಲಿ ಎದ್ದು ಕಾಣುವ ಮನುಷ್ಯನೆಂದರೆ—ಜಾನ್ ಕಾರ್ಲೆಟನು; ನಗುತ್ತ, ಕೆಲೆಯುತ್ತ ಪ್ರತಿಯೊಬ್ಬರೊಡನೆ ಇಲ್ಲದ್ದೊಂದು ಮಾತನಾಡುತ್ತಿರುವನು. ನಿರ್ಲಜ್ಜತನವು ಮುಖದ ಮೇಲೆ ಒಡಮೂಡಿದಂತೆ ಕಾಣುವ ಜಾನ್ ಕಾರ್ಲೆಟನು ಮೋಸಳ ಕಣ್ಣಿಗೆ ದೂರಿನಿಂದಲೇ ಕಂಡನು. ಇತ್ತ ಮುಳ್ಳುತಂತಿಯ ಬೇಲಿಯೊಳಗೆ ಇನೆಯ ಕಂಪೌಂಡಿನಲ್ಲಿ ಬಿಳಿಪೊಡೆದ ಮುಖವುಳ್ಳ ಓಸ್ಕಾರನೂ ಕಣ್ಣಿಗೆ ಬಿದ್ದನು.

ಸಾಮಾನುಗಳೆಲ್ಲವೂ ಬಂದಿರುವವೋ ಇಲ್ಲವೋ ಎಂಬ ವಿಚಾರಣೆಯಾದ ಮೇಲೆ ಲಿಲಾವಿಗೆ ಮೊದಲಾಯಿತು. ವಕೀಲನು ಲಿಲಾವಿನ ಕರಾರುಗಳನ್ನು ಕೊಳ್ಳ ಬಂದವರಿಗೆಲ್ಲ ಕೇಳಿಸುವಂತೆ ಓದಿದನು. ಇಲ್ಲಿ ತಂದಿರಿಸಿದ ಯಾವತ್ತೂ ಸಾಮಾನುಗಳು ಮಾರತಕ್ಕವಿವೆ; ಬೇಕಾದವರು ಲಿಲಾವಿನಲ್ಲಿ ಬೇಡಬಹುದು. ಲಿಲಾವುಗಾರನು ಎತ್ತರವಾದ ಸ್ಥಳದ ಮೇಲೆ ನಿಂತನು. ಕಾರಕೂನನ ಕೈಯಲ್ಲಿ ಕಾಗದಪುಟಿಕೆಗಳಿವೆ. ಇನ್ನುಳಿದ ರೈತರಾಣೇರು ಸುತ್ತಲೂ ಹತ್ತಂಬಾಳ ಕಟ್ಟಿ ನಿಂತಿರುವರು.

'ಸಭ್ಯಗೃಹಸ್ಥರೇ, ಇಂದು ನೀವೆಲ್ಲರೂ ನರಿಮೋರೆಯನ್ನು ನೋಡಿ ಬಂದಿರುವಿರಿ. ಸಾಮಾನು—ಸುಮಾನು ದನಕರು—ಕುರಿ ಮೊದಲಾದವು ಬಹಳ ಚನ್ನಾಗಿಯೇ ಇವೆ. ಲಿಲಾವಿನಿಂದ ಮಾರುತ್ತವೆಂದ ಮೇಲೆ ಅಗ್ಗವಾಗಿ ದೊರೆಯುವದರಲ್ಲಿ ಸಂಶಯವಿಲ್ಲ. ನೀವೆಲ್ಲರೂ ಕೊಳ್ಳಬೇಕೆಂಬ ಆಶೆಯಿಂದ ಬಂದಿರುವಿರಿ. ಜಾನ್‌ಕಾರ್ಲೆಟ್, ನೀವು ಎಲ್ಲವನ್ನೂ ಕೊಳ್ಳುವ ಇಚ್ಛೆಯಿಂದ ಬಂದಿರುವಿರಿ. ನಿಮ್ಮ ಹಮ್ಮಣಿಯ ಬಾಯನ್ನು ಬಿಚ್ಚಿಡಿರಿ. ಮಿಸ್ಟರ್ ಲೇಸ್, ಈ ನಡುಗಡ್ಡೆಯಲ್ಲಿ ಪಶುಜಾತಿಯನ್ನು ಪರಿಕಿಸುವದರಲ್ಲಿ ನಿಮ್ಮಷ್ಟು ಜಾಣರು ಯಾರೂ ಇರುವದಿಲ್ಲ. ಇಲ್ಲಿ ಜಾತಿಯ ದನಗಳಿವೆ, ಕುರಿಗಳಿವೆ; ಕೋಳಿಗಳಿವೆ, ಎಲ್ಲವನ್ನೂ ನೋಡಿಕೊಳ್ಳಿರಿ' ಎಂದು ಲಿಲಾವುಗಾರನು ಕೂಗಿಕೊಂಡನು. ಲಿಲಾವು ಪ್ರಾರಂಭವಾಯಿತು.

ಮೊದಲಿಗೆ ಲಿಲಾವಿಗೆ ಹಿಡಿದುದು ೫ ವರುಷದ 'ಎಲ್ಬ' ಎಂಬ ಜಾತಿಯ ಆಕಳು. ಮೋನಸಳ ಮಮತೆಯಿಂದ ಪರಿಪೋಷಿತವಾದದ್ದು. ೪೦ ಪೌಂಡು ಕೊಟ್ಟು, ಕೊಂಡು ತಂದು ಬಹಳ ದಿನಗಳಾಗಿರಲಿಲ್ಲ. ೨೦ ಪೌಂಡಿನ ಮುಂದೆ ಯಾವ ಅಂಕಿಯೂ ಬಾರದ್ದರಿಂದ ೧ನೇ ಸವಾಲ, ೨ನೇ ಸವಾಲ, ೩ನೇ ಸವಾಲೆಂದು ಮಾರಾಟವಾಯಿತು.

'೨೦ ಪೌಂಡು ಎಂದು ಕೇಳಿದವರಾರು?' ಎಂದು ಕಾರಕೂನನು ಕೇಳಿದನು.

'ಜಾನ್ ಕಾರ್ಲೆಟ್' ಎಂದು ಉತ್ತರ ಬಂದಿತು.

ಇದರಂತೆಯೆ ಲಿಲಾವು ಅರ್ಧ ತಾಸು ನಡೆಯಿತು. ಲಿಲಾವಿಗೆ ಹಿಡಿದ ಪ್ರತಿಯೊಂದು ಪದಾರ್ಥವು ಅರ್ಧ ಬೆಲೆಗೆ ಮಾರಾಟವಾಯಿತು. ಬೇಡಿದವರು ಯಾರೆಂಬದನ್ನು ಕೇಳುವ ಕಾರಣವಿಲ್ಲದಾಯಿತು. ಜಾನ್‌ಕಾರ್ಲೆಟನು ಎಲ್ಲ ರೈತರಿಗೆ ಬಾಯಿಬಡಿ ಮಾಡಿಸಿದ್ದನೋ ಏನೋ ಯಾರು ಬಲ್ಲರು? ಕೈಬೆಚ್ಚಗೆ ಮಾಡಿದ್ದರೂ ಮಾಡಿರಬಹುದು. ಯಾಕಂದರೆ ಅಲ್ಲಿ ಬಂದವರಲ್ಲಿ ಒಬ್ಬರೂ ತುಟಿ ಎರಡು ಮಾಡಲಿಲ್ಲ. ಲಿಲಾವಿನ ಪ್ರದರ್ಶನವು ಪೂರ್ವಸಂಕೇತವಿದ್ದಂತೆ ಜರುಗಿತೆಂಬುದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ಇದೆಲ್ಲ ಹುಸಿ ವ್ಯವಹಾರವನ್ನು ನೋಡುತ್ತ ಕುಳಿತ ಮೋನಸಳಿಗೆ ಕಸಿವಿಸಿಯಾಯಿತು. ಇದು ಮೋಸ! ಮಾಟ! ಜಾನ್‌ಕಾರ್ಲೆಟನೆ ಎಲ್ಲವನ್ನೂ ಕೊಳ್ಳುವದೆಂದರೆ! ಉಳಿದವರು ಬಂದರೇತಕ್ಕೆ? ಎಂಥ ಲಿಲಾವಿದು! ಎಂಬ ವಿಚಾರಗಳಿಂದ ಈ ಕುಹಕತನವನ್ನು ಪ್ರತಿಭಟಿಸಬೇಕೆಂದು ಕುಳಿತಲ್ಲಿಂದ ಏಳಬೇಕೆನ್ನುವಷ್ಟರಲ್ಲಿ ಆ ಬದಿಯಿಂದ ಧಾವಿಸಿ ಬರುತ್ತಿದ್ದ ಓಸ್ಕಾರನ ಮೂರ್ತಿಯು ಮೋನಸಳ ಕಣ್ಣಿಗೆ ಬಿದ್ದಿತು. ಸಿಟ್ಟು ಶಾಂತವಾಯಿತು. ಅವಳು ಕುಳಿತಲ್ಲಿಂದೇಳಲಿಲ್ಲ.

ಲಿಲಾವು ಮತ್ತೂ ಒಂದು ತಾಸು ಸಾಗಿತು. ಮೋನಸಳು ಲಿಲಾವಿನ ಪ್ರಹಸನದ ಬಗ್ಗೆ ನಿರ್ವಿಚಾರಿಯಾದಳು. ಹೊರಗೆ ನಡೆದಿರುವ ಮೋಸಗಾರಿಕೆಯ ಪ್ರತಿಯೊಂದು ಶಬ್ದವೂ ಅವಳಿಗೆ ತೊಂದರೆಕೊಟ್ಟರೂ ಆದರಿಂದ ಅವಳು ಕೆರಳಲೂ ಇಲ್ಲ; ಶಾಂತವಾಗಿ ಸಹಿಸಿಕೊಂಡಳು.

ಲಿಲಾವು ಜರುಗಿದ ರೀತಿಯನ್ನು ಕಂಡು ಇನ್ನುಳಿದ ಒಕ್ಕಲಿಗರಿಗೆ ನಗೆ ತಡೆಯದಾಯಿತು. ಬಿದ್ದು ಬಿದ್ದು ನಕ್ಕರು. ಲಿಲಾವುಗಾರನು ಮತ್ತು ವಕೀಲನು ಕಿವಿಕಚ್ಚಿ ಏನನ್ನೋ ಮಾತಾಡಿಕೊಂಡರು.

'ವಕೀಲರೇ, ಆಗಬಹುದು—ನಿಮ್ಮ ಇಚ್ಛೆಯಿದ್ದರೆ' ಎಂದು ಲಿಲಾವುಗಾರನು ಬಾಯಿಬಿಚ್ಚಿ ಮಾತಾಡಿದನು. ಬೇರೆಯವರಿಗೆ ಅರ್ಥವಾಗಬೇಕೇನು? ಅದರಂತೆ ವಕೀಲನು ಎದ್ದು ನಿಂತು ದೊಡ್ಡ ದನಿಯಿಂದ ಕೂಗಿದನು.

'ಸಭ್ಯರೇ, ಇದು ಹೀಗೆಯೇ ಮುಂದುವರಿಯುವದು. ಎಲ್ಲ ಸಾಮಾನುಗಳನ್ನು ಮಾರುವದಿದೆಯೆಂದು ನಾನು ಈ ಮೊದಲು ಹೇಳಿರದಿದ್ದರೆ, ನನ್ನ ಹೊಣೆಗಾರಿಕೆಯಿಂದಲೇ ಲಿಲಾವನ್ನು ಇಲ್ಲಿಗೆ ನಿಲ್ಲಿಸಿಬಿಡುತ್ತಿದ್ದೆ. ನೀವೆಲ್ಲರೂ ನಮ್ಮ ಸ್ವಬಾಂಧವರಾದ ಮಾಂಕ್ಸ ಮನ್ನರು. ನಿಮ್ಮ ವಿಚಾರಗಳು ನಮ್ಮಂತೆ ಇರುವವೆಂದು ಭಾವಿಸಿದ್ದೇನೆ. ಇದೇನು ಯುದ್ಧವಲ್ಲ—ಮತ್ತೇನೂ ಅಲ್ಲ. ನಿಮಗೆಲ್ಲರಿಗೂ ಆ ಮುದುಕ ರಾಬರ್ಟ್‌ಕ್ರೇಅನ್ನನ ಪರಿಚಯವು ಚನ್ನಾಗಿಯೇ ಇದೆ. ಅವನೀಗ ಮರೆಯಾಗಿದ್ದಾನೆ. ಅವನ ಒಬ್ಬಳೇ ಮಗಳಿಗೆ ನಾವು ಅನ್ಯಾಯವಾಗದಂತೆ ನಡೆದುಕೊಳ್ಳುವದು ನಮ್ಮ ಕರ್ತವ್ಯ' ಎಂದು ಮಾತಾಡಿ ಉಳಿದವರಿಗಾಗಿರಬಹುದಾದ ಸಂಶಯವನ್ನು ದೂರಗೊಳಿಸಿದನು—ತಾನು ಸತ್ಯಸಂಧನೆಂಬ ಹೆಮ್ಮೆಯಿಂದ.

ವಕೀಲನ ಮಾತಿನ ಇಂಗಿತವು ಹೊಳೆದುದರಿಂದ ನಗೆಯು ಮಾಯವಾಯಿತು. ಲಿಲಾವು ಸಾಗಿತು—ಮೊದಲಿನಂತೆಯೆ. ಸಂಜೆಯವರೆಗೂ ನಾಗಬಹುದೆಂದು ಕಲ್ಪಿಸಿದ ಲಿಲಾವು ಈತಾಸಿಗೆ ಮುಗಿದುಬಿಟ್ಟಿತು.

'ಸಭ್ಯಗೃಹಸ್ಥರೇ, ನೀವೆಲ್ಲರೂ ಲಿಲಾವಿನಲ್ಲಿ ಭಾಗವಹಿಸಿದ್ದಕ್ಕೆ ನಾನು ನಿಮಗೆ ಧನ್ಯವಾದಗಳನ್ನರ್ಪಿಸುತ್ತೇನೆ. ನಾನು ಈ ಮೊದಲು ಊಹಿಸಿದಂತೆ ಜಾನ್ ಕಾರ್ಲೆಟನೇ ಎಲ್ಲವನ್ನೂ ಕೊಂಡುಬಿಟ್ಟಿದ್ದಾನೆ' ಎಂದು ಲಿಲಾವುಗಾರನು ಭಾಷಣಮಾಡಿದನು.

'ಅವನಿಗೆ ಒಳಿತಾಗಲಿ' ಎಂದು ವಕೀಲನು ಹರಸಿದನು. ಅವನ

ಹೋಳಿಗೆಯು ತುಪ್ಪದಲ್ಲಿ ಬಿತ್ತು. ಕಾರ್ಯವು ಸುಸೂತ್ರವಾಗಿ ಸಾಂಗ ವಾದುದಕ್ಕೆ ವಕೀಲನು ಹಿಗ್ಗಿದನು.

'ರಾಯರೇ, ಲಿಲಾವು-ಗಿಲಾವುಗಳಿಲ್ಲದೆಯೇ, ನಾನು ಅವಳಿಗೆ ಇದಕ್ಕೂ ಅದೆಷ್ಟೋ ಪಟ್ಟು ಹೆಚ್ಚು ಹಣವನ್ನು ಕೊಡಬಹುದಾಗಿತ್ತು' ಎಂದು ಜಾನ್‌ಕಾರ್ಲೆಟನು ಮಂದಹಾಸವನ್ನು ಬೀರಿದನು.

'ಕೊಡಲಾರದೆ ಏನು? ಆದರೆ ಮಾಡುವದೇನು?' ಎಂದು ವಕೀಲನ ಉತ್ತರ ಬಂದಿತು. ಮತ್ತಿಷ್ಟು ಅವನು ಉಬ್ಬಿದನು.

'ಅವಳಿಗೆ ಬುದ್ಧಿ ಬಂದಂತಾಯಿತು. ಈ ನಡುಗಡ್ಡೆಯಲ್ಲಿ ಪರದೇಶಿಯರು ಎಂದೂ ವಾಸಿಸಲಾಗದು. ಪೌಂಡ್ಸರ ಹಣವು ಜರ್ಮನಿಗೆ ಹೋಗತಕ್ಕದ್ದಲ್ಲ' ಎಂದು ಮೊದಲಾಗಿ ತಮ್ಮ ಮನಬಂದಂತೆ ಹರಟುತ್ತ ಅಲ್ಲಿ ಕೂಡಿದ ಜನರೆಲ್ಲರೂ ತಮ್ಮ ಮನೆಯ ದಾರಿಹಿಡಿದರು. ಮೋನಳು ಮಾತ್ರ ಶಾಂತಚಿತ್ತಳಾಗಿ ಆ ಶಬ್ದಗಳನ್ನಾಲಿಸುತ್ತ ತೆಪ್ಪಗಿದ್ದಳು.

ಕೆಲ ನಿಮಿಷಗಳ ಮೇಲೆ ವಕೀಲನು ಮೋನಳ ಮನೆಯೊಳ ಬಂದು 'ನಾವು ಅಪೇಕ್ಷಿಸಿದಷ್ಟು ಹಣವು ಎಲ್ಲ ಸಾಮಾನುಗಳನ್ನು ಲಿಲಾವು ಮಾಡಿದರೂ ಹೊರಡಲಿಲ್ಲ. ನೀನು ಕೊಡಬೇಕಾದಷ್ಟು ಹಣಕ್ಕೆ ಸರಿಯಾಗುವಷ್ಟು ಬರಬೇಕಾದರೆ ಸಾಕುಬೇಕಾಯಿತು' ಎಂದು ಗಂಭೀರ ಮುಖಮುದ್ರೆಯಿಂದ ಮಾತನಾಡಿದನು.

'ನನಗೇನೂ ಉಳಿಯಲಿಲ್ಲವೇ? ಸ್ವಲ್ಪಾದರೂ ಹಣ ನನ್ನ ಕೈಗೆ ಬರುವಂತಾಗಲಿಲ್ಲವೇ?' ಎಂದು ಮೋನಳು ಗಾಬರಿಯಾದವರಂತೆ ವಿಚಾರಿಸಿದಳು.

'ಇಲ್ಲ. ಎಷ್ಟೂ ಉಳಿಯಲಿಲ್ಲ. ಏನು ಮಾಡುವದು? ಉಪಾಯವಿಲ್ಲ' ಎಂದು ವಕೀಲನು ಹುಸಿನಗೆ ನಕ್ಕನು.

ಮೋನಳು ಏಳಬೇಕೆಂದು ಮಾಡಿದನು; ಆದರೆ ಅವಳ ಸರ್ವಸ್ವವೆ ಕೈಬಿಟ್ಟು ಹೋದ ದುಃಖವು ಅವಳನ್ನು ಏಳಗೊಡಲಿಲ್ಲ. ವಕೀಲನು ಅಲ್ಲಿಂದ ಕಾಲ್ತೆಗೆದ ತುಸು ಹೊತ್ತಿನ ಮೇಲೆ ನಾಯಿಗಳ ಬೊಗಳುವಿಕೆ, ಜನರ ಕೂಗಾಟ, ಬ್ಯಾ ಎಂಬ ಕುರಿಗಳ ಏಕನಾದ, ದನಕರುಗಳ

ಕೂಗಾಟ ಪ್ರಾರಂಭವಾಯಿತು. ಹೊಸ ಯುಜಮಾನನ ಸೇವಕರು ಅವು ಗಳನ್ನು ಹಿಡಿದುಕೊಂಡು ಹೋಗುತ್ತಿರುವದರಿಂದ ಅವುಗಳೂ ಸಂಕಟ ಪಟ್ಟು ಚೀರಾಡುತ್ತಿದ್ದವು.

ಕೊನೆಗೆ ಎಲ್ಲವೂ ಶಾಂತವಾಯಿತು. ಈ ತೆರನಾಗಿ ಸಂಭವಿಸ ಬಹುದೆಂದು ಅವಳಿಗದೆಷ್ಟೋ ಸಲ ಎನಿಸಿತ್ತು. ಆದುದರಿಂದ ಅವಳು ಹೌಹಾರಲಿಲ್ಲ; ಎದೆಯು ಗಟ್ಟಿಯಾಗಿದ್ದಿತು. ಕಲ್ಪಿಸಿದಂತೆ ಪ್ರತ್ಯಕ್ಷವಾಗಿ ಸಂಗತಿಯು ಜರುಗಿಯೇ ಬಿಟ್ಟಿತು. ಈಗ ಅಮೇರಿಕೆಯು ಆಶೆಗೆ ಆಧಾರ ವಿಲ್ಲದಾಯಿತು—ಅಂದರೆ ಜಗತ್ತಿನಲ್ಲಿ ಸ್ಥಳವಿಲ್ಲದಾಯಿತು. ಪಾಪ! ಅವರು ನಿರ್ಗತಿಕರಾದರು; ಅವರಿಗೆ ಜಗತ್ತು ಶೂನ್ಯವಾಯಿತು.

ಮುಲಗುವ ಹೊತ್ತಿಗೆ ಓಸ್ಕಾರನು ಬಂದನು. ಅವನು ತುಟಿಗಳನ್ನು ಕಡಿಯುತ್ತಿದ್ದನು. ಕಣ್ಣು ಕೆಂಡವಾಗಿದ್ದವು. ಉತ್ಸಾಹವೆಲ್ಲವು ಕುಗ್ಗಿ, ನಿರ್ಗತಿಕಳಾದ ಅವಳು ಓಸ್ಕಾರನನ್ನು ನೀರು ತುಂಬಿದ ಕಣ್ಣುಗಳಿಂದ ನೋಡಿದಳು.

'ನಿನಗೆ ಲಿಲಾವಿನ ಹಣೆಯ ಬರೆಹವು ತಿಳಿಯಿತೆ?'

'ತಿಳಿದಿದೆ. ದೈವ ಕೆಟ್ಟದು.'

'ಜನರು ಇಷ್ಟು ನಿರ್ದಯರಾಗುವರೆಂಬ ಕಲ್ಪನೆಯೇ ನನಗೆ ಈವರೆಗೂ ಬಂದಿದ್ದಿಲ್ಲ.'

'ಅಯ್ಯೋ! ನಿರ್ದಯನೇ?' ಎನ್ನುತ್ತ ವಿಕಟಹಾಸ್ಯದಿಂದ ಓಸ್ಕಾರನು ಹುಚ್ಚನಂತೆ ಕುಣಿದಾಡತೊಡಗಿದನು.

'ಎಷ್ಟೋ ತಲೆತಲಾಂತರಗಳಿಂದ ಗೊತ್ತಿದ್ದ ಸ್ವಬಾಂಧವರೂ- ಬಂದೇ ನೆತ್ತರದವರೂ ಹೀಗೆ ವರ್ತಿಸುವದು ಜಗತ್ತಿನಲ್ಲಿ ಹೊಸ ಪಾಠ ವಾಗಿರುವದು. ದೇವಾ, ನಿನ್ನ ಸೃಷ್ಟಿಯಲ್ಲಿಯ ಶ್ರೇಷ್ಠಪ್ರಾಣಿಯೆಂದು ಹೆಮ್ಮೆಪಡುವ ಈ ಮಾನವಜಾತಿಯು ಎಷ್ಟು ಕೀಳ್ತರಗತಿಗೆ ಇಳಿಯು ಹತ್ತಿರುವದು ಇನ್ನೂ ಲಕ್ಷಕ್ಕೇಕೆ ಬಂದಿರುವದಿಲ್ಲ. ಈ ಕುಂದು ಹುಟ್ಟುಗುಣವಾಗಿರಲೆಂದು ಬೇಕೆಂತಲೇ ಮಾನವಜಾತಿಗೆ ವರವನ್ನು ನೀಡಿರುವಿಯಾ? ಇಲ್ಲಿಯೊಂದೇ ಏಕೆ? ಸಮಗ್ರಭೂಭಾಗದ ಮೇಲೆ

ಎಲ್ಲಿ ಹೋದರೂ, ಯಾವ ಕಾಲಕ್ಕಾದರೂ ಜನರು ಒಂದೇ. ಇದು ಯುದ್ಧ! ಮೋನಾ, ಮಾನವತ್ವದ ಭೂತದಯಾಂತಃಕರಣದ ಕಣಗಳೆಲ್ಲವನ್ನೂ ಅದು ಕೊಚ್ಚಿಕೊಂಡು ಹೋಗಿದೆ. ಅಂದಮೇಲೆ ನಾವು ಮಾನವ ಜಾತಿಯಿಂದ ದಯವನ್ನು ಕೋರುವದು ಎಲ್ಲಿಯ ನ್ಯಾಯ?' ಎಂದು ಓಸ್ಕಾರನು ಒಂದೇ ಉಸಿರಿನಿಂದ ಮಾತನಾಡುತ್ತ ನಗಹತ್ತಿದನು. ಎಷ್ಟು ಹೊತ್ತಾದರೂ ಅವನ ಆ ಹುಚ್ಚು ನಗೆಯೇನು ಕಡಿಮೆಯಾಗಲಿಲ್ಲ.

ಮೋನಳು ಅವನ ನಗುವನ್ನು ಕಡಿಮೆಮಾಡಲು ಯತ್ನಿಸಿದಳು. ನಗು ನಿಂತಿತು. ಮಾತು ಮುಂದರಿಯಿತು:

'ಯುದ್ಧ! ಎಂಥ ಅನ್ಯಾಯ! ಏನು ಅನಾಹುತ! ಯುದ್ಧವನ್ನು ಹೂಡುವಂಥ ಬುದ್ಧಿಜೀವಿಗಳು ಎಂಥ ಮೂರ್ಖರು! ಸ್ವದೇಶರಕ್ಷಕರೆಂಬ ಬಿರುದಿವರಿಗೆ! ಎಂಥ ಭಕ್ತರಿವರು—ಅಲ್ಲ ದ್ರೋಹಿಗಳು! ಅಭಿಷಿಕ್ತ ದ್ರೋಹಿಗಳು—ಠಕ್ಕರು, ಸ್ವಾರ್ಥಿಗಳು. ದೇವರ ಸೃಷ್ಟಿಯ ವಿರುದ್ಧ ಬಂಡು ಹೂಡಿ ಹೋರಾಡಿದ ಮಹಾ ವೀರಾಧಿವೀರರು!' ಎಂದೆನ್ನುತ್ತ ಮುಂಗೈಯಿಂದ ಎದುರಿನ ಕಂಬಕ್ಕೆ ಬಲವಾಗಿ ಗುದ್ದಿ 'ಆದರೆ..ಎಷ್ಟೇ ಆದರೂ ಯುದ್ಧವೊಂದೇ ಕೆಡಕಿನದಲ್ಲ—ಸಂಪೂರ್ಣ ಕಾರಣವಲ್ಲ'ವೆಂದು ಓಸ್ಕಾರನು ನುಡಿದನು.

'ಹಾಗಾದರೆ ಮತ್ತೇನು ಕಾರಣವಿದೆ ಓಸ್ಕಾರ್?' ಎಂದು ಮೋನಳು ಮುಂಗಾಣದೆ ವಿಚಾರಿಸಿದಳು.

ಮೋನಾ, ಕೇಳು. ಯುದ್ಧದ ಫಲವಾದ ಈ ಒಪ್ಪಂದ. ಈ ಶಾಂತಿ. ಒಪ್ಪಂದವಾದ ಮೇಲೆ ಶಾಂತಿಯು ನೆಲೆಸಿ, ಸಮಾಧಾನದಿಂದ ನಿದ್ರೆ ಮಾಡಬಹುದೆಂದು ಜನರು ಊಹಿಸಿದ್ದರು. ಎಷ್ಟು ಮೂರ್ಖತನವಿದು! ಎಂಥ ಕಠೋರ ಕಲ್ಪನೆಯು! ದುಃಖಿತರಾದ ಮುದುಕರು ತಮ್ಮ ತರುಣ ಮಕ್ಕಳ ಮರಣವನ್ನು ನೆನೆಸದೆ ಪೂರ್ಣ ಮರೆತು, ಜೂಜಾಡುವದರಲ್ಲಿ ಕಾಲ ಕಳೆಯುವರು. ಯುದ್ಧನಿಯಂತ್ರಕರು ಆಡಂಬರದಿಂದ ಭಾಷಣದ ಸುರಿಮಳೆಗರೆಯುವರು. ಹಣ, ಹೊಲ, ಮನೆ ಮೊದಲಾದ ಆಸ್ತಿಯ ತಂಟೆಗಳಲ್ಲಿ ಮಗ್ನರಾಗುವರು. ಹೀಗೆ ಕೆಲಕಾಲ ಸಂದಿದ ಮೇಲೆ ಮತ್ತೆ

ಯುದ್ಧವು ಆರಂಭವಾಗುವದು. ಆಗ ಅದೇ ತಾರುಣ್ಯದಲ್ಲಿ ಕಾಲಿಡುತ್ತಿರುವ ಎಳೆಯ ಜೀವನಗಳ ಬಲಿದಾನವಾಗುವದು. ಜನಾಂಗಗಳ ಮೇಲೆ ಜನಾಂಗಗಳು ಬೀಳುವವು; ತಮ್ಮ ನೆತ್ತರದ ಹಸಿವನ್ನು ಹಿಂಗಿಸಿಕೊಳ್ಳುವವು. ಮುಂದೆ ಒಪ್ಪಂದ–ಶಾಂತಿ. ಆ ಮೇಲೆ ದೊಡ್ಡದೊಂದು ಕೊಪ್ಪರಿಗೆಯಲ್ಲಿ ದ್ವೇಷದ ಭಟ್ಟಿಯನ್ನಿಳಿಸಲಾಗುವದು. ಅದರಿಂದ ಜನರ ಅಂತಃಕರಣವು ಕಲ್ಲಿಗಿಂತ ಕಲ್ಲಾಗುವದು. ಜಗತ್ತಿನ ತುಂಬೆಲ್ಲ ದ್ವೇಷದ ವಿಷಬೀಜವು ಹಬ್ಬಿ, ಸ್ತ್ರೀಪುರುಷರ ಅಂತರಾಳವನ್ನು ಪ್ರವೇಶಿಸಿ ನಮಗೆ ಸಂಭವಿಸಿದ ಫಲವನ್ನು ಕೊಡುವದು' ಎಂದು ಗಂಭೀರ ಭಾಷಣವನ್ನೆ ಅವನು ಮಾಡಿದನು.

ಓಸ್ಕಾರನು ತೆರಪಿಲ್ಲದೆ ಎಚ್ಚರವಿಲ್ಲದವರಂತೆ ಮಾತಾಡುತ್ತಿರುವದನ್ನು ಮೋನಳು ದಂಗುಬಡಿದು ಕೇಳುತ್ತಲಿದ್ದಳು. ಆದರೆ ಅವಳಿಗೊಂದೂ ಅರ್ಥವಾಗಲಿಲ್ಲ. ಮೋನಳು ಎವೆಗಳನ್ನು ಮಿಳುಕಿಸದೆ ಅವನನ್ನು ನೆಟ್ಟನೋಟದಿಂದ ಮಾತ್ರ ನೋಡುತ್ತಿದ್ದಳು.

'ನಾವು ಮಾಡುವುದಾದರೂ ಏನು ? ಹೊತ್ತು ಹಾಗೆ ಒದಗಿ ಬಂದಿತಲ್ಲವೇ ಓಸ್ಕಾರ್ ?' ಎಂದು ಮೋನಳು ಮಾತನಾಡಿದಳು.

ಓಸ್ಕಾರನು ಶಾಂತನಾದನು–ಶುದ್ಧಿಯ ಮೇಲೆ ಬಂದನು. ನಿರ್ಗತಿಕರ ದಿಕ್ಕೇಡಿತನದ ಹಣೆಬರಹಕ್ಕಾಗಿ ಹಣೆಹಣೆ ಬಜ್ಜಿಕೊಂಡನು. ಪಾಪ ! ಅವರಿಗೆ–ಜೀವನವು ಹೇಯವೆನಿಸದೆ ಬಿಟ್ಟೀತೆ? ಅವಳ ಎರಡೂ ಕೈಗಳ ಬೊಗಸೆಯಲ್ಲಿ ತನ್ನ ಮುಖವನ್ನಿರಿಸಿ, ಸಣ್ಣ ಕೂಸಿನಂತೆ ಅಳುತ್ತ 'ಮೋನಾ, ನನ್ನನ್ನು ಕ್ಷಮಿಸು. ನಾನೇ ನಿನ್ನನ್ನು ಈ ದುಃಖಕ್ಕೆ ಗುರಿ ಮಾಡಿದೆ. ನಾನು ಪಾಪಿ. ನನ್ನನ್ನು ಕ್ಷಮಿಸು' ಎಂದು ಅಂಗಲಾಚಿ ಬೇಡಿಕೊಂಡಳು

'ನಾವು ಅನೇಕ ಹಂಚಿಕೆಗಳನ್ನು ಹಾಕಿದೆವು. ಸಾಹಸ ಮಾಡಿದೆವು. ನಮ್ಮ ಶಕ್ತಿ ಮೀರಿ ಹೆಣಗಾಡಿದರೂ ನಮಗೆ ಕೊನೆಗೆ ಅನಾಥದೆಶೆ ಬಂದಿತು. ಏನು ಮಾಡುವದು ಹೇಳು ಓಸ್ಕಾರ್ ?'

'ಹೌದು. ನಾವು ಬಹಳ ಹಾದಿ ತೆಗೆದೆವು; ಎಲ್ಲ ಅಡ್ಡ ದಾರಿಗಳಾದವು. ಕಣ್ಣು ಕಟ್ಟಿ ಅಡವಿಯಲ್ಲಿ ಬಿಟ್ಟಂತಾಯಿತು. ಉಪಾಯವೇ ಇಲ್ಲ.'

'ಇಲ್ಲ, ಓಸ್ಕಾರ್ ಇಲ್ಲ. ದೇವರೇ ನಮ್ಮ ಹೃದಯಗಳನ್ನು ಹೊಂದುಗೂಡಿಸಿದ್ದರಿಂದ ನಮ್ಮ ದೈವವು ಒಳಿತಾಗುವದೆಂದು ನಾನು ಭಾವಿಸಿಕೊಂಡಿದ್ದೆ. ಆದರೇನು? ಇಂಥ ವಿಪತ್ತು ನಮಗೆ ಒದಗಲಾರದೆಂದು ಕಲ್ಪಿಸಿದ್ದೆ. ದಯಾಪರನಾದ ದೇವನಿಗೆ ನಮ್ಮ ಮೊರೆ ಕೇಳಿಸದಾಯ್ತೇ?'

'ಕೇಳಿಸಲಿಲ್ಲ. ಇದರಿಂದ ಸ್ಪಷ್ಟವಾಗಲಿಲ್ಲವೇ? ನಮ್ಮನ್ನು ರಕ್ಷಿಸಲು ಆವನು ಮರೆತುಬಿಟ್ಟಿರುವನು. ಆ ಸರ್ವಸಾಕ್ಷೀಭೂತನಾದ ಅವನ ಕೃಪಾದೃಷ್ಟಿಯು ನಮ್ಮನ್ನುಳಿಸಲು ಮಾತ್ರ ಶಕ್ತಿಹೀನವಾಯಿತು; ಅಳಿಸಲು ಶಕ್ತಿಯುತವಾಯಿತು.'

'ಹೌದು. ಅವನ ಅವಕೃಪೆಗೆ ಈಡಾದ ನಾವು ಇನ್ನು ಬದುಕುವದು ಹೇಗೆ? ಎಲ್ಲಿ?' ಎಂದು ಮೋನಳು ಮಾತಾಡುತ್ತಿರುವಂತೆಯೇ ಓಸ್ಕಾರನು ತಲೆಯನ್ನು ತಗ್ಗಿಸಿಕೊಂಡು ತನ್ನ ಸ್ಥಳಕ್ಕೆ ನಿರಾಶೆಯ ಸಮಾಧಿಯನ್ನು ಹೊಂದಲು ಹೊರಟುಹೋದನು.

---

# ಸೇಡು

ಈಸ್ಟರ ಹಬ್ಬದ ಹಿಂದಿನ ರವಿವಾರ; ನಸುಕಿನಲ್ಲಿ ಎದ್ದವಳೆ ಕಿಡಿಕಿಯಲ್ಲಿ ನೋಡಿದಳು. ಹೇಳಹೆಸರಿಲ್ಲದಂತೆ ಹಾಳಾಗಿ ಹೋದ ಕಂಪೌಂಡುಗಳ ಬದಲು ಕಪ್ಪಿಟ್ಟ ಭೂಮಿಯು ಹೊರತು ಕಾಣಬೇಕೇನು? ನಾಲ್ಕು ವರುಷಗಳ ಮೇಲೆ ಮತ್ತೆ ಫಲವನ್ನೀಯುವ ಹೊಲಗಳಾಗಬೇಕೇ ಈ ಭೂಮಿಯು ಎಂಬ ಕಲ್ಪನೆಯು ಅವಳ ತಲೆಯಲ್ಲಿ ಸುಳಿದಿರಲು ಸಾಕು.

೩ನೆಯ ಕಂಪೌಂಡಿನಲ್ಲಿ ಮಾತ್ರ ಏನೋ ಸ್ವಲ್ಪ ಚೈತನ್ಯವಿದೆ. ಅಲ್ಲುಳಿದ ಜನರೂ ತೀರ ಕಡಿಮೆ. ಓಸ್ಕಾರನು ಕಟ್ಟಕಡೆಗೆ ಹೋಗಲಿರುವ ಗುಂಪಿನಲ್ಲಿ ತಾನು ಹೋಗತಕ್ಕವನೆಂದು ಮೋನಳಿಗೆ ತಿಳಿಸಿದ್ದನು. ಆದರೆ ನಿಶ್ಚಿತ ದಿನ ಗೊತ್ತಿರಲಿಲ್ಲ.

ಹಾಳು ಹಾಳು ಸುರಿಯುತ್ತಿದ್ದ ಆ ಸ್ಥಳವು ಭೀಕರ ಮೌನವನ್ನು

ತಾಳಿದ್ದಿತು. ಎಂಥ ಧೈರ್ಯಶಾಲಿಗಳನ್ನೂ ಕೈಕಾಲುಗೆಡಿಸುವಂಥ ವಾತಾವರಣವು ಅಲ್ಲಿ ತಾಂಡವವಾಡುತ್ತಿದ್ದಿತು. ಮೈ-ಕೈತುಂಬ ಕೆಲಸ ವಿದ್ದುದಾದರೆ ಅದು ಲಕ್ಷ್ಯದಲ್ಲಿ ಬರುವ ಸಂಭವ ಕಡಿಮೆ. ಈಗ ಈ ಮೋನಳಿಗೆ ಅಂಥ ಯಾವ ಕೆಲಸವೂ ಇಲ್ಲ.

ವಸಂತಕಾಲವು ಇದೀಗ ಮೊಗದೋರುತ್ತಿದೆ. ಸುತ್ತಲೂ ಹಳದಿ ಹೂಗಳು ಕಂಗೊಳಿಸುತ್ತಿವೆ. ಆವಳು ತಂದೆಯು ಗೋರಿಯ ಮೇಲಿಡ ಬೇಕೆಂದು ಕೆಲವು ಹೂವುಗಳನ್ನು ಕಿತ್ತುಕೊಂಡು ನೇರವಾಗಿ ಕರ್ಕ ಪ್ಯಾಟ್ರಿಕ್ಕನ ದಾರಿ ಹಿಡಿದಳು. ದಾರಿಯಲ್ಲಿ ಯಾವ ನರಪಿಳ್ಳೆಯೂ ಇರಲಿಲ್ಲ. ಮರಣ-ಶಾಂತಿಯಲ್ಲಿ ಜಾತಿದ್ವೇಷದ ಪಿಪಾಸೆಯನ್ನು ಹಿಂಗಿಸಿಕೊಂಡು ಮುದುಕನು ಗೋರಿಯಲ್ಲಿ ಮಲಗಿದ್ದಾನೆ. ತುಸು ದೂರದಲ್ಲಿ ಬರೆಹದ ಕಲ್ಲಿಲ್ಲದ ಲಡವಿಗ್ಗನ ಗೋರಿ. ಅದರ ಮೇಲಿದ್ದ ಕಾಜಿನ ಗುಮ್ಮಟವು ಈಗ ಸೀಳಿದೆ. ಹೂಗಳು ಹಾಳಾಗಿವೆ. ಭೂದೇವಿಯ ಗರ್ಭದಲ್ಲಿ ಮಣ್ಣುಗೂಡಿ ದವರಿಬ್ಬರೂ ಮಣ್ಣಾಗಿ ಕೂಡುವರೆಂಬಲ್ಲಿ ಸಂದೇಹವಿಲ್ಲ.

ಅಲ್ಲಿಂದ ತಿರುಗಿದಳು. ಅಲ್ಲೊಬ್ಬ ಕಲ್ಲುಕುಟ್ಟಿಗನು ಹೆಸರಿನ ಪಟ್ಟಿ ಯೊಂದನ್ನು ಮುಂದಿಟ್ಟುಕೊಂಡು ಒಂದು ಕಲ್ಲುಮೇಲೆ ಕಟಿಯುತ್ತ ಕುಳಿತಿದ್ದನು. ಅವನೇನು ಮಾಡುತ್ತಿದ್ದನೆಂಬುದನ್ನು ಮೋನಳು ವಿಚಾ ರಿಸಿದಳು. ಯುದ್ಧದಲ್ಲಿ ಮಡಿದಂಥವರ ಹೆಸರುಗಳನ್ನು ಕೆತ್ತಿಸಿ, ಆ ಕಲ್ಲನ್ನು ಪೀಲ್ ಪಟ್ಟಣದ ದೇವಾಲಯದೆದುರಿನಲ್ಲಿಡಲಾಗುವದೆಂದು ಅವನು ಹೇಳಿದನು. ನಾಳಿಲ್ಲ ನಾಡದು ೯ ಗಂಟೆಗೆ ಅದರ ಉದ್ಘಾಟನ ಸಮಾರಂಭವಾಗುವದು. ಯಾಕೆಂದರೆ ಯುದ್ಧದಲ್ಲುಳಿದು ಬಂದವರು ರವಿವಾರ ರಾತ್ರಿಯಲ್ಲಿ ಲಿವರ್‌ಪೂಲಿನಿಂದ ಹೊರಟ ಹಡಗದಿಂದ ಇಲ್ಲಿಗೆ ಬರುವವರಿದ್ದಾರೆ. ಸುತ್ತುಮುತ್ತಲಿನ ಜನರೆಲ್ಲರೂ ಸೇರುತ್ತಾರೆ. 'ದೊಡ್ಡ ದೊಂದು ಸಮಾರಂಭವೇ ಜರುಗುವದು. ನೀನು ಹೋಗುವದಿಲ್ಲವೇ' ಎಂದು ಕೇಳಿದ್ದಕ್ಕೆ 'ಇಲ್ಲ'ವೆಂದು ಉತ್ತರವನ್ನಿತ್ತು ಹೆಸರುಗಳನ್ನೋದ ತೊಡಗಿದಳು. 'ರಾಬಿಯ ಹೆಸರು ಕಾಣುವದಿಲ್ಲವಲ್ಲ!' ಎಂದು ಪ್ರಶ್ನಿಸಿ ದಳು. ತನ್ನ ಕೆಲಸವನ್ನು ತುಸು ನಿಲ್ಲಿಸಿ 'ಹೌದು, ಈ ಪಟ್ಟಿಯಲ್ಲಿ ಅವರು

ಅದನ್ನು ಬರೆದುಕೊಟ್ಟಿಲ್ಲ ' ಎಂದು ಹೇಳಿದನು. ' ಅವರೆಂದರೆ ಯಾರು ?' ಎಂಬ ಪ್ರಶ್ನೆಗೆ ' ಇಲ್ಲಿಯ ಮುಖ್ಯಾಧಿಕಾರಿಯೂ, ಪಾದ್ರಿಯೂ ' ಎಂದುತ್ತರ ಬಂದಿತು.

' ನನ್ನ ಅಣ್ಣನೂ ಯುದ್ಧದಲ್ಲಿ ಮಡಿದಿರುವ; ವಿಕ್ಟೋರಿಯಾ ಕ್ರಾಸೂ ದೊರೆತಿಲ್ಲೇನು ? ಉಳಿದವರೊಂದಿಗೆ ಇವನ ಹೆಸರೇಕೆ ಬರಬಾರದು ?'

' ಅದಾರೋ ಒಬ್ಬರ ಕಾರಣದಿಂದ ಅವನ ಹೆಸರು ತೆಗೆದುಹಾಕಲ್ಪಟ್ಟಿದೆ ' ಎಂದಂದು ಕಲ್ಲುಕುಟ್ಟಿಗನು ತನ್ನ ಕೆಲಸದಲ್ಲಿ ತೊಡಗಿದನು.

ಅವನ ಮಾತು ಮೋನಳಿಗೆ ಸಟ್ಟಿತು. ಅವಳಿಗೆ ಸಂಬಂಧಪಟ್ಟವರ ನೆನಪು ಕೂಡ ಈ ಜಗತ್ತಿನಲ್ಲುಳಿಯಬಾರದೆಂಬ ಶಬ್ದವನ್ನು ಆ ಉಳಿಯು ಮಾಡುತ್ತಿತ್ತು. ಅವಳು ಹತಾಶಳಾಗಿ ' ಒಳ್ಳೆ ಜನರೂ ಕೂಡ ಈ ಜಗತ್ತಿನಲ್ಲಿ ಇಷ್ಟು ದಯಾಹೀನರಾಗಲು ಕಾರಣವೇನು ? ತಿಳಿಯದಾಗಿದೆ ' ಎಂದು ಅಳಲಾರಂಭಿಸಿದಳು.

ಮಾನವರ ಮನಸು ಕಲುಷಿತವಾಗಲು ಯುದ್ಧ, ಶಾಂತಿಗಳು ಕಾರಣವೆಂದು ಓಸ್ಕಾರನೆನಬಹುದು. ಆದರೆ ಅವಳು ಓಸ್ಕಾರನನ್ನು ಪ್ರೀತಿಸುವದೂ, ಓಸ್ಕಾರನು ಅವಳನ್ನು ಪ್ರೀತಿಸುವದೂ ದೈವದ ಸಂಘಟನೆ. ದೈವದ ನಿಯಂತ್ರಕನು ದೇವರಲ್ಲದಿನ್ನಾರು ? ದೇವರು ಮನುಷ್ಯರ ಕಣ್ಣುಗಳನ್ನು ಒಮ್ಮೆಲ್ಲೊಮ್ಮೆ ತೆರೆಯಿಸದೆ ಬಿಡನು. ಆಗ ಅಧಿಕಾರಿಗಳು, ಪಾದ್ರಿಗಳು ತಮ್ಮಷ್ಟಕ್ಕೆ ತಾವೇ ನಾಚಿಗೊಳ್ಳುವ ಕಾಲ ಬರಬಹುದು. ಅವಳು ಒಳ್ಳೆ ಹೆಣ್ಣುಮಗಳು ಎಂಬ ಹೆಸರೂ ಪ್ರಸಿದ್ಧಿಯಾಗಬಹುದು. ಯಾರು ಬಲ್ಲರು ?

ಒಂದು ಸಂಜೆಯಲ್ಲಿ ತನಗೆ ಬೇಕಾದ ಸಾಮಾನು ತರುವದಕ್ಕಾಗಿ ಅವಳು ಪೇಟೆಗೆ ಹೋಗಿದ್ದಳು. ಅಂಗಡಿಕಾರರು ಅವಳನ್ನು ಅಷ್ಟು ಮರ್ಯಾದೆಯಿಂದ ನಡೆಯಿಸಿಕೊಳ್ಳಲಿಲ್ಲ. ಅವಳೂ ಅದು ಅಪಮಾನವೆಂದು ಭಾವಿಸಲಿಲ್ಲ. ಮಬ್ಬುಗತ್ತಲಾಗುತ್ತ ಬಂದಿತ್ತು. ನಾಕಾಲೋಯ್‌ಕ್ಕೆ ಹೊರಳುವ ದಾರಿಯು ಬದಿಗಿರುವ ಕಾಲುದಾರಿಯ ಮೂಲೆ

ಗೊಂದು ಗಡಂಗ. ಅದರ ಹತ್ತಿರದಿಂದ ಮೋನಳು ಕೈಯಲ್ಲಿದ್ದ ಚೀಲ ದೊಂದಿಗೆ ಮನೆಯ ಕಡೆಗೆ ಸಾಗಿದ್ದಳು.

ಅಲ್ಲೊಂದು ಚಿಕ್ಕ ಮನೆ. ಒಳಗೆ ಏನೋ ಗದ್ದಲ ನಡೆದಿತ್ತು. ಹೊರಗೆ ಜನಸಮೂಹ; ಕೇಳುತ್ತ ನಿಂತಿದೆ. ಒಬ್ಬನು ಪ್ರತಿಜ್ಞೆ ಮಾಡು ತ್ತಿದ್ದಾನೆ; ಒಬ್ಬ ಹುಡುಗಿಯು ಚೀರಿಕೊಳ್ಳುತ್ತಿದ್ದಾಳೆ; ಮುದುಕಿ ಯೊಬ್ಬಳು ವಾದಿಸುತ್ತಿದ್ದಾಳೆ. 'ನಿನ್ನ ಜರ್ಮನ್ನನನ್ನು ಪೋಷಿಸಲು ನನ್ನ ಯುದ್ಧದ ಹಣವು ವೆಚ್ಚವಾಗುತ್ತೇ?' ಎಂದು ಕೇಳಿದನು.

'ಹ್ಯಾರಿ, ಇದು ನನ್ನ ತಪ್ಪಲ್ಲ; ಬೇರೆ ಸ್ಥಳಕ್ಕಾಗಿ ಯತ್ನಿಸಿದೆ. ಯಾರೂ ಕೊಡಲಿಲ್ಲ.'

'ಆದರಂತೆ ನಾನೂ ಕೊಡುವದಿಲ್ಲ. ಮೊದಲು ಈ ಮನೆಯಿಂದ ಹೊರಬೀಳು.'

'ಸ್ವಲ್ಪ ಸಮಾಧಾನ ತಾಳು. ಎಲ್ಲವನ್ನೂ ಹೇಳುತ್ತೇನೆ. ಕೇಳಿಕೋ. ನನ್ನ ಹುಡುಗಿಯನ್ನು ಮುಟ್ಟಿದರೆ ಕಣ್ಣು ಕಿತ್ತೇನು? ಜೋಕೆ!'

'ಮೊದಲು ಹೊರಗೆ ಹೋಗು. ನನ್ನ ಕಣ್ಣೆದುರು ಬೇಡ ಊ.. ರ.. ಹು ......'

'ಅಯ್ಯೋ ಹ್ಯಾರಿ! ಲೀಝಾ! ಹ್ಯಾರಿ' ಎಂದು ಮುದಕಿಯು ಚೀರಿಕೊಂಡಳು.

ಮೋನಳು ಅಲ್ಲಿ ನೆರೆದ ಹೆಂಗಸರಲ್ಲೊಬ್ಬಳನ್ನು ನಡೆದದ್ದಾದರೂ ಏನೆಂದು ವಿಚಾರಿಸಿದಳು.

'ಓ, ಗೊತ್ತಿಲ್ಲವೇ? ಲೀಝಾ ಕಿನ್ನಿಸಳು— ಜರ್ಮನ್ ಕೂಸು—. ಆವಳಣ್ಣನು ಯುದ್ಧದಿಂದ ಮರಳಿರುವನು. ಅವಳನ್ನು ಮನೆಯಿಂದ ಹೊರದೂಡುತ್ತಿದ್ದಾನೆ. ಇಷ್ಟೆ, ಆಶ್ಚರ್ಯವೇನಿದೆ ಇದರಲ್ಲಿ?'

ಅರ್ಧಮರ್ಧ ಕುಡಿದು ದುಂದಾದ ಅನೇಕ ಜನರು ಗಡಂಗದಿಂದ ಹೊರಬಿದ್ದು ಅಲ್ಲಿ ಬಂದರು. ಅವರೇನು ನಡುವೆ ಬಾಯಿ ಹಾಕಲಿಲ್ಲ. ಬೊಕ್ಕತಲೆಯ ಕುಡಿದ ಸೈನಿಕನೊಬ್ಬನು ಬಗಲಲ್ಲಿ ಮಗುವಿರುವ ಒಬ್ಬ ಳನ್ನು ದರದರ ಎಳೆಯುತ್ತ ಹೊರಬರುವ ದೃಶ್ಯವು ಕಂಡಿತು. 'ನೀನೂ

ನಿನ್ನ ಜರ್ಮನ್ನ ಪ್ರಿಯಕರನೂ ಹಾಳಾಗಿ ಹೋಗಿರಿ' ಎಂದವಳನ್ನು ಬೀದಿಗೆ ನೂಕಿ ಮನೆಯೊಳಹೊಕ್ಕು ಬಾಗಿಲನಿಕ್ಕಿಕೊಂಡನು.

'ಹೊರಗೆ ಹಾಕಬೇಡ' ಎಂದು ಚೀರುತ್ತ ಬಾಗಿಲವನ್ನು ಬರಿಗೈಯಿಂದ ಅವಳು ಬಡಿಯುತ್ತಿದ್ದಳು.

ಆ ಸೈನಿಕನು ಬಾಗಿಲ ತೆರೆದು ಹೊಸ್ತಿಲ ಮೇಲೆ ನಿಂತು 'ನೀವಿಬ್ಬರೂ ನನ್ನ ಕಣ್ಣಿಗೆ ಬೀಳಬಾರದು. ಇಲ್ಲಿಂದ ಹೊರಟು ಹೋಗಲೇಬೇಕು' ಎಂದು ಬಿರುಸಾಗಿ ಹೇಳಿದನು.

'ನೀನೇಕೆ ತಿರುಗಿ ಬಂದೆ ಕತ್ತೆಯೆ? ಜರ್ಮನ್ನರೇಕೆ ನಿನ್ನನ್ನು ಕೊಂದು ಹಾಕಲಿಲ್ಲ' ಎಂದವಳು ತನ್ನ ರೊಚ್ಚನ್ನು ಹೊರಗೆಡವಿದಳು. ಅದನ್ನು ಕೇಳುವದು ಅವನಿಗೆ ಸಹನವಾಗಲಿಲ್ಲ. ಅವಳನ್ನು ಹೊಡೆಯಲು ಕೈಯನ್ನೆತ್ತಿದನು. ಅಷ್ಟರಲ್ಲಿ ಮೋನಳು ಚೀಲವನ್ನು ಚೆಲ್ಲಿಕೊಟ್ಟು ಆ ಹಿಂಡಿನೊಳಗಿಂದ ಅಲ್ಲಿಗೆ ಧಾವಿಸಿ, ಆ ಸೈನಿಕನ ಕೆನ್ನೆಗೆ ಬಲವಾಗಿ ಎರಡೇಟು ಕೊಟ್ಟಳು. ತೊಲೆಯಂತೆ ಅವನು ನೆಲಕ್ಕುರುಳಿದನು. ಸುತ್ತಲು ನೆರೆದ ಆ ಕುಡುಕರೆಲ್ಲರನ್ನುದ್ದೇಶಿಸಿ 'ನೀವು ಮನುಷ್ಯರೇ? ಯಾರೆನಬೇಕು ನಿಮಗೆ? ನಿಮ್ಮ ತಾಯಂದಿರು ಹೆಂಗುಸರಲ್ಲವೇ? ನಿಮ್ಮಂಥ ಕುಲ-ಕಲಂಕ ಮಕ್ಕಳಿಗಾಗಿ ಅವರೆಷ್ಟು ವ್ಯಥೆಪಡಬಹುದು?' ಎಂದು ಮೋನಳು ಬಿರುಸು ಬಾಣಗಳ ಮಳೆಯನ್ನೆ ಸುರಿಸಿದಳು.

ಆ ನೆಲಕ್ಕುರುಳಿದವನು ದೂಳನ್ನು ಕೊಡವಿಕೊಳ್ಳುತ್ತ 'ಹಾ! ಹಾ! ಹಾಗೆ ಇವಳೂ ಒಬ್ಬಳು. ಇಬ್ಬರೂ ಒಂದೆ ದಾರಿ ಹಿಡಿದವರು. ನಿನ್ನ ಐದಿಶೆ ನನಗೆ ಗೊತ್ತಿದೆ. ಮತ್ತೆ ಇಲ್ಲಿ ಆಚಾರ ಹೇಳಲಿಕ್ಕೆ ಬಂದಿದ್ದಾಳೆ—ದೊಡ್ಡವಳಾಗಿ, ಹೋಗತ್ತ' ಎಂದು ಅವನು ಗಹಗಹಿಸಿ ನಗತೊಡಗಿದನು. ಜನಸಮೂಹವೇ ನಕ್ಕಿತು. ಹೆಂಗಸರಾತೂ ಒಟಗುಟ್ಟಿದರು. ಅವಳು ಆ ಸೈನಿಕನಿಗೆ ಕೊಟ್ಟ ಏಟಿಗಿಂತಲೂ ಈ ಮಾತಿನ ಪೆಟ್ಟು ಅವಳಿಗೆ ಹೆಚ್ಚಾಯಿತು. ಅವಳು ಕಲ್ಲು ಬೊಂಬೆಯಂತೆ ತುಸು ಹೊತ್ತು ನಿಂತಳು. ಆ ಮೇಲೆ ತನ್ನ ಚೀಲವನ್ನು ತೆಗೆದುಕೊಂಡು ಆ ಜನ ಸಮೂಹದಿಂದ ಮೆಲ್ಲನೆ ಜಾರಿ, ಉತ್ತರದಿಂದ ಸಾಗಿದಳು.

ಹೀಗೆ ಜನರು ಅವಳ ವಿಷಯಕ್ಕೆ ಅಭಿಪ್ರಾಯಪಡುತ್ತಾರೆ. ಅವಳ ಹೃದಯವೇದನೆ, ಮನೋವ್ಯಥೆ ಅವರಿಗೆ ಹೇಗೆ ಗೊತ್ತಾಗಬೇಕು ?

ಅಂದು ಅವಳಿಗೆ ನಿದ್ದೆ ಬರಲೇ ಇಲ್ಲ. ಬೆಳಗುಮುಂಜಾವು— ಹಳವಂಡದ ಕಾಲ. ಕೋಣೆಯಲ್ಲಿ ರಾಬಿಯು ಬಂದಹಾಗೆ ಭಾಸ ವಾಯಿತು. ಅಧಿಕಾರಸ್ಥನ ಉಡುಪಿನಲ್ಲಿದ್ದನು. ಅದರಿಂದ ಅವಳಿಗೆ ಹೆಮ್ಮೆಯು ಬಂದಿತ್ತು. ಅವನು ಸತ್ತದ್ದು ಅವಳು ಮರೆತಿಲ್ಲ. ಅದು ಅವನ ಭೂತ; ತನ್ನ ದರ್ಶನಕ್ಕಾಗಿ ಬಂದಿದೆಯೆಂಬಂತಾಯಿತು ಅವಳಿಗೆ.

'ಮೋನಾ, ೩ ವರ್ಷಗಳ ಹಿಂದೆ ನನಗಾರಾದರೂ ಈ ಸುದ್ದಿ ಯನ್ನು ತಿಳಿಸಿದ್ದರೆ, ನಾನು ಅವನನ್ನು ಕೊಂದುಬಿಡುತ್ತಿದ್ದೆ. ಜೀವಂತ ಉಳಿಯಗೊಡುತ್ತಿದ್ದಿಲ್ಲ' ಎಂದು ಮಾತಾಡಿದ ಹಾಗಾಯಿತು.

ಮೋನಳು ಮಾತಾಡಲೆತ್ನಿಸಿದಳು. ಆದರೆ 'ರಾ. . ಬಿ. . ' ಎನ್ನು ವದೂ ಕೂಡ ಆಗಲಿಲ್ಲ.

'ದೇವರೇ, ನಾನು ನಿನ್ನ ಬಗ್ಗೆ ಅಷ್ಟೊಂದು ಅಭಿಮಾನಪಡುತ್ತಿದ್ದೆ. ನನಗೆ ವ್ಹಿಕ್ಟೋರಿಯಾ ಕ್ರಾಸ್ ದೊರೆತಿದೆಯೆಂದು ತಿಳಿದುಬಂದಾಗ ನಾನು ನಕ್ಕು 'ನನ್ನ ತಂಗಿಯು ಇಲ್ಲಿ ಬಂದಿದ್ದರೆ ಅದನ್ನು ಎಂದೋ ಪಡೆಯಬಹುದಾಗಿತ್ತು' ಎಂದೆ. ನೀನು ಜರ್ಮನ್ನರನ್ನು ದ್ವೇಷಿಸುತ್ತಿ ದ್ದಷ್ಟು ಬೇರಾರೂ ದ್ವೇಷಿಸಿರಲಿಕ್ಕಿಲ್ಲ. ಅಷ್ಟಿತ್ತು ನಿನ್ನ ದ್ವೇಷ! ಆದರೀಗ ನೀನು ಒಬ್ಬ ಜರ್ಮನ್ನನಿಗೇ ವಶವಾಗಿರುತ್ತೀ. ಎಂಥ ವಿಪರೀತವಿದು!'

'ರಾ. . ಬಿ. . ರಾ. . ಬಿ. . . . '

'ಹಾಗೇಕೆ ಮಾಡಿದೆ? ನೀನು ಮಾಡಿದುದು ಎಲ್ಲರಿಗೂ ತಿಳಿದಿದೆ. ತಂದೆಗೆ ನಿಜವಾಗಿಯೆ ಗೊತ್ತಾಗಿತ್ತು. ಅದರ ಹೃದ್ರೋಗದಿಂದಲೆ ಅವನು ತೀರಿಕೊಂಡನು'

ಮೋನಳು ಚೀರಿಕೊಳ್ಳಬೇಕೆಂದಳು; ಅದೂ ಆಗಲಿಲ್ಲ.

'ಕಣ್ಮರೆಯಾಗು, ಮೋನಾ ಪಾಪವನ್ನೂ, ಅಪಮಾನವನ್ನೂ ಯಾರಿಗೂ ಗೊತ್ತಾಗದಂಥ ಬಿಂದು ಮೂಲೆಯಲ್ಲಿ ಹುಗಿದಿಡು. ನನ್ನ ಹೃದಯವನ್ನೇ ಛೇದಿಸಿ ಬಿಟ್ಟಿರುವಿ. ಈಗ. . . . '

'ರಾಬೀ..ರಾ..ಬೀ....'

ತನ್ನ ಧ್ವನಿಯಿಂದಲೇ ಅವಳು ಎಚ್ಚತ್ತಳು. ಈ ದುರಂತಾವಸ್ಥೆಯಲ್ಲಿ ಅವಳಿದ್ದಳು. ಸೂರ್ಯನೂ ಅತ್ತ ಜಿಗಲಾರಂಭಿಸಿದನು.

ಕನಸು! ಅಷ್ಟೆ. ಆದರೆ ಎಲ್ಲ ಕಥೆಯೂ ಹೊರಬಿತ್ತು. ಇದು ಅದರ ಕೊನೆ. ಅವಳ ಬಾಳು ಈ ದಾರಿಯನ್ನು ತುಳಿದಿತು. ಪ್ರೇಮವು ಸುಟ್ಟು ಬೂದಿಯಾಗಲಿ. ಅವಳ ಪಾಲಿಗೆ ಜೀವನ ಮತ್ತು ಜಗತ್ತು ಶೂನ್ಯಮಯವಾದವು. ಅವಳು ಯಾವ ಪಾಪವನ್ನು ಮಾಡಿರುವಳೆಂದು ಈ ಪರಿಸ್ಥಿತಿಯುಂಟಾಗಬೇಕು?

ಓಸ್ಕಾರನ ಹೊರತು ಇವಳಿಗಾರೂ ದಿಕ್ಕಿಲ್ಲ. ಇವಳನ್ನು ಬಿಟ್ಟರೆ ಅವನ ಜೀವನವು ಸುಗಮವಾಗುವದು; ಹಾಗೆ ಇವಳದೂ. ಒಬ್ಬರನ್ನೊಬ್ಬರು ಅಗಲಿದರೆ ಮಾತ್ರ ಇಬ್ಬರೂ ಬದುಕಬಲ್ಲರು. ಇಬ್ಬರೂ ಕೂಡಿಯೇ ಬಾಳುವದು ಅಸಾಧ್ಯವಾದುದು. ಒಬ್ಬರಾದರೂ ಬದುಕಿದರಾಯಿತೆಂದು ಕೈಬಿಟ್ಟರೆ ಓಸ್ಕಾರನು ಸುಸೂತ್ರವಾಗಿ ಪಿತೃಭೂಮಿಗೆ ಹೋಗಿ ಜೀವಿಸಬಹುದು.

ಹೀಗಾದರೆ ಓಸ್ಕಾರನ ಮನೋವ್ಯಥೆ ಮಾತ್ರ ಹಿಂಗಲಾರದೆಂಬುದು ಸ್ಪಷ್ಟವಿದೆ. ಹೌದು, ಅವನಿಗೆ ದುಃಖವಾಗುವದು. ಆದರೂ ಅವನು ಮರೆತಿರಬಹುದೆ? ತನ್ನ ಮನೆಗೆ ತೆರಳಿದ ಮೇಲೆ, ಮೋನಳ ಸಂಪರ್ಕವಿಲ್ಲದ ಮೇಲೆ ಅವನು ಅಲ್ಲಿ ಸುಖವಾಗಿ ತನ್ನ ಜೀವನವನ್ನು ಸಾಗಿಸಬಹುದೆ? ಎಂಬ ಶಂಕೆಯುಂಟಾಗುವದು ಸ್ವಾಭಾವಿಕವು. ಅವನು ತರುಣನಲ್ಲವೇ..? ಜಗತ್ತಿನಲ್ಲಿ ಜೀವಿಸಬೇಕೆಂಬ ಆಶೆ–ಆಕಾಂಕ್ಷೆಗಳು ಅವನಲ್ಲಿ ಜಾಗ್ರುತವಿರುವವು. ಆದರೆ ಮೋನಳು ಈ ರೀತಿ ವಿಚಾರಮಾಡುತ್ತಿರುವಳೆಂದು ಮಾತ್ರ ಯಾರೂ ಕಲ್ಪಿಸಬಾರದು.

---

# ನಿರ್ಧಾರ

ಈಸ್ಟರ ಹಬ್ಬ. ಈ ದಿನದ ಸೊಬಗು ಮೈಮನಸಕೆ ಸುಖಕರವು; ಉತ್ಸಾಹಪೂರಿತವಾದುದು. ಮೋನಳು ಮನೆಯ ವ್ಯವಸ್ಥೆಯನ್ನು ಕೊನೆಗೊಮ್ಮೆ ಮಾಡುವುದರಲ್ಲಿ ತೊಡಗಿದ್ದಾಳೆ; ಕೆಲಸವೂ ತೀರಿತು. ಇನ್ನೂ ತಾನು ನ್ಯಾರಿಯನ್ನು ಸಹ ಮಾಡಿಲ್ಲೆಂಬ ಅರಿವಾಯಿತವಳಿಗೆ. ಸಂಕಟವೂ ಆಗಿದ್ದಿಲ್ಲ. ಆದರೂ ಬಾಯಾರಿಕೆ ಬಹಳಾಗಿತ್ತು. ಎರಡು ಕಪ್ಪು ಚಹಾ ಮಾತ್ರ ಒಂದೇ ಗುಟುಕಾಯಿತು.

ದೇವಾಲಯದ ಗಂಟೆ ಬಾರಿಸಿತು. ಕೊನೆಯಸಲ ದೇವದರ್ಶನವನ್ನು ತೆಗೆದುಕೊಳ್ಳಬೇಕೆಂದು ನಿರ್ಧರಿಸಿದಳು. ಅವಳೇಕೆ ಹೋಗಬಾರದು? ಒಳ್ಳೆಯ ಜನರು ನಿಂದಿಸುವಂಥ ಕೆಲಸವೊಂದನ್ನು ತಾನು ಮಾಡಿರುವದು ಅವಳಿಗೆ ಗೊತ್ತು; ಆದರೆ ಅದರ ಒಳಿತು ಕೆಡಕುಗಳ ವಿಷಯವಾಗಿ ಈಗ ವಿಚಾರ ಬೇಡವೆಂದು ಅವಳು ನಿಶ್ಚಿಂತಳಾಗಿದ್ದಳು.

ಬೇಗ ಹೊರಡಲಾಗಲಿಲ್ಲ. ಗಂಟೆಯ ಸಪ್ಪಳವು ನಿಂತಿತು. ಬೀದಿಯಲ್ಲಿ ಯಾರ ಸುಳಿವೂ ಇರಲಿಲ್ಲ. ಅಂದು ಉಡುಪು ತೊಡಲು ಹೆಚ್ಚು ಹೊತ್ತು ಹಿಡಿಯಿತು. ಅವಳೇಕೋ ಬೇಸತ್ತವರಂತೆ ಅಲ್ಲಲ್ಲಿ ವೇಳೆಯನ್ನು ಕಳೆದು ಕಡೆಗೆ ದೇವಾಲಯಕ್ಕೆ ಹೊರಟಳು.

ಅವಳು ದೇವಾಲಯವನ್ನು ಮುಟ್ಟುವ ಮೊದಲೆ ದೇವರ ಸೇವೆಯಾರಂಭವಾಗಿತ್ತು. ಬಾಗಿಲು ಅರ್ಧ ತೆರೆದಿತ್ತು. ಜನಸಮೂಹವು ಮೊಳಕಾಲೂರಿ ಪಾದ್ರಿಯು ಹೇಳುತ್ತಿರುವ ಪ್ರಾರ್ಥನೆಗಳನ್ನು ಎಲ್ಲರೂ ಅನ್ನುತ್ತಿದ್ದರು. ಆ ಹೊತ್ತಿನಲ್ಲಿ ಅವಳು ಒಳಹೋಗದೆ ಹೊರಬದಿಗೆ ನಿಂತುಕೊಂಡಳು.

ವೇದಿಕೆಯ ಬಲಬದಿಯಲ್ಲಿ ಚಿಕ್ಕಮಕ್ಕಳು ಮೊಳಕಾಲೂರಿ ನಿಂತು ಈಸ್ಟರ ಹಬ್ಬಕ್ಕಾಗಿ ಹೊಲಿಸಿದ ಹೊಸ ಹೊಸ ಅಂಗಿಗಳನ್ನು ನೋಡಿಕೊಳ್ಳುತ್ತ ಹಿಗ್ಗುತ್ತಲಿವೆ. ಅವನ್ನು ಕಂಡು ಅವಳಿಗೂ ಬಾಲ್ಯದ ನೆನಪಾಗಿರಲು ಸಾಕು. ಆ ದಿನಗಳಿದ್ದರೆ ಬಲು ಸುಖವಾಗಿರಬಹುದಿತ್ತೆಂದು

ಕೊಂಡಿರಬೇಕು. ಈಗ ಮಾತ್ರ ಅದೆಲ್ಲವೂ ಎದೆ ಬಿರಿಸುವಂಥ ದೃಶ್ಯ ವೆಂದೆನಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಯಾಕಂದರೆ ಸಾವು ಬಾಗಿಲದಲ್ಲಿ ಕಾದು ಕುಳಿತಿರುವಾಗ ಜೀವನವು ಹೆಚ್ಚು ಸುಂದರವಾಗಿ ಕಾಣುವದು ಸಹಜವಿದೆ.

ಪದ್ಧತಿಯಂತೆ ಪ್ರಾರ್ಥನೆಯು ಸಾಗಿತು: 'ಯೇಸುವೇ, ಆತ್ಮ ಪ್ರಿಯನೆ, ನಿನ್ನ ಹೃದಯದಿ ನೆಲಿಸಬರುವೆ' ಎಂಬ ಕೊನೆಯ ಪದ್ಯವೂ ಹೇಳಲ್ಪಟ್ಟಿತು. ಆವಳಿಗೆ ಈ ಹಾಡು ಬಲು ದಿನಗಳಿಂದ ಗೊತ್ತಿದ್ದರೂ ಈವರೆಗೆ ಅದರರ್ಥವು ಇಷ್ಟು ಚೆನ್ನಾಗೆಂದೂ ತಿಳಿದಿರಲಿಲ್ಲ,

ಯೇಸುವಿನ ಕೊನೆಕೊನೆಯ ದಿನಗಳು, ಅವನ ಸಾವು, ಪುನರ್ಜನ್ಮ, ವೈರಿಗಳ ದ್ವೇಷ, ಕೈಬಿಟ್ಟ ಸ್ನೇಹಿತರು—ಇದೆಲ್ಲವೂ ಭೀಕರವಾದರೂ ಆ ರಮ್ಯಕಥಾನಕವು ಏಕಕಾಲಕ್ಕೆ ಆವಳಿಗೆ ನೆನಪಾದವು. ಅವನು ತನ್ನ ಸಾವನ್ನು ತಪ್ಪಿಸಬಹುದಿತ್ತು; ಆದರವನು ಹಾಗೆ ಮಾಡಲಿಲ್ಲ. ತನ್ನಿಚ್ಛಾನುಸಾರವಾಗಿ ಅವನು ತೀರಿಕೊಂಡನು. ಯಾಕಂದರೆ ತನ್ನ ಸಾವು ಜಗತ್ತನ್ನು ರಕ್ಷಿಸಬಹುದೆಂಬ ದೃಢವಾದ ನಂಬಿಗೆಯು ಅವನಲ್ಲುಂಟಾಗಿತ್ತು. ಆತನ ಮರಣವು ಮನುಷ್ಯನಿಗೆ ಆತ್ಮದ ವಿಕಾಸವನ್ನೆ ಮಾಡಿತಲ್ಲದೆ ಬೇರಿನ್ನೇನೂ ಮಾಡಲಿಲ್ಲ. ಸಿರಿ—ಸಂಪತ್ತು, ಸ್ಥಾನಮಾನಗಳು ಏನನ್ನೂ ಮಾಡಲರಿಯವು. ದ್ವೇಷಾಸೂಯೆಗಳಿಗೀಡಾಗಿ, ಸ್ನೇಹಿತರಿಂದ ತಿರಸ್ಕರಿಸಲ್ಪಟ್ಟು, ಕುಟುಂಬದವರಿಂದ ಹೊರದೂಡಲ್ಪಟ್ಟವನಾದರೂ ಯೇಸುವಿಗೇನೂ ಕುಂದುಕೊರತೆಗಳುಂಟಾಗಲಿಲ್ಲ. ಪ್ರೇಮವೆ ಅವನಲ್ಲಿ ಮೂಡಿದುದು. ಜಗತ್ತನ್ನು ಪ್ರೀತಿಸಿದನು. ಅದಕ್ಕಾಗಿ ಪ್ರಾಣವನ್ನರ್ಪಿಸಿದನು. ಅವನೆ ಪ್ರೇಮಮೂರ್ತಿ.

'ಆದುದರಿಂದಲೆ ನೊಂದ ಜೀವಿಗಳು ಅವನ ಸನ್ನಿಧಿಯನ್ನು ಸೇರಬಯಸುವವು. ಎರಡು ಸಾವಿರ ವರುಷಗಳಿಂದಲೂ ಆತನನ್ನು ಸ್ಮರಿಸುತ್ತಲಿರುವರು; ಜಗವು ಲಯವಾಗುವವರೆಗೂ ಸ್ಮರಿಸುವರು—'ನಿನ್ನ ಸನ್ನಿಧಾನಕ್ಕೆ ಹಾತೊರೆದು ಬರುವೆವು' ಎಂದು ಹಾಡುತ್ತ ಸಾಗುವರು.

ಪ್ರಾರ್ಥನೆಯು ಮುಗಿದ ನಂತರ ಶಿಷ್ಯರು ಆಶೀರ್ವಾದವನ್ನು ಹೊಂದುವ ಹೊತ್ತಿಗೆ ಮೋನಳು ಮನೆಯ ದಾರಿ ಹಿಡಿದಳು. ಈಗ

ಅವಳ ಕಣ್ಣಲ್ಲಿ ನೀರಿಲ್ಲ. ಅವಳ ಹೃದಯಾಂತರಾಳದಲ್ಲಿ ಶಾಂತಿಯು ನೆಲೆಗೊಂಡಿತ್ತು.

ದೇವರು ತನ್ನನ್ನು ಕ್ಷಮಿಸಲೆಂಬ ವಿಚಾರದಿಂದ ಏನಾದರೂ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಬೇಕೆಂದು ಈವರೆಗೆ ಅವಳು ಚಿಂತಿಸುತ್ತಿದ್ದಳು. ಆದರೆ ಈಗ ಮಾತ್ರ ಹಾಗೆ ವಿಚಾರಮಾಡಳು. ಯೇಸುವು ಸ್ವ-ಇಚ್ಛೆಯಿಂದ ಸತ್ತಿದ್ದರೆ—ಪ್ರೇಮಕ್ಕಾಗಿ ಜೀವವನ್ನರ್ಪಿಸಿದ್ದರೆ—ತಾನೇಕೆ ಹಾಗೆ ಮಾಡಬಾರದು ? ಆತನು ಸಾಯುವದರಿಂದ ಜಗತ್ತಿನ ಕಲ್ಯಾಣವಾಗುವದೆಂದು ತಿಳಿದಿದ್ದರೆ, ತಾನೂ ಸತ್ತುಹೋಗುವುದರಿಂದ ಕಲ್ಯಾಣವೇಕಾಗಬಾರದೆಂಬ ವಿಚಾರವು ಅವಳಲ್ಲುಂಟಾಗಿದ್ದವು.

ಅವಳ ಆ ಗೊಂದಲಗೆಟ್ಟ ಮನಃಸ್ಥಿತಿಯಲ್ಲಿ ಯಾವತರದ ಭೇದಗಳು ಕಂಡುಬರಲಿಲ್ಲ: ನ್ಯಾಯ್ಯ-ವೈಷಮ್ಯಗಳ ಪರಿವೆ ಅವಳಿಗಿರಲಿಲ್ಲ. ತಾನು ಮಾಡಬಯಸಿದುದು ಪಾಪವಲ್ಲ—ಆತ್ಮ ಸಮರ್ಪಣೆಯೆಂದು ಅವಳು ಭಾವಿಸಿದ್ದಳು. ಯುದ್ಧದ ಫಲವಾಗಿ ಜಗತ್ತು ದ್ವೇಷಾಸೂಯೆಗಳಿಂದ ತುಂಬಿತುಳುಕುತ್ತಿದ್ದರೆ ಅವಳ ಸಾವು ಅದನ್ನು ರಕ್ಷಿಸಬಹುದು. ಪಾಪ! ಅವಳೊಬ್ಬ ತರುಣಿ. ಏನು? ಯಾಕೆ? ಹಾಗೆ ಮಾಡಿದಳೆಂಬುದು ಜಗತ್ತಿನಲ್ಲಿ ಯಾರಿಗೂ ಗೊತ್ತಾಗಲಾರದು. ಆತನಿಗೊಬ್ಬನಿಗೆ ಮಾತ್ರ ಗೊತ್ತಾಗಿಯೇ ತೀರುವದು. ಅವಳು ಓಸ್ಕಾರನಿಗೆ ಇದೆಲ್ಲವನ್ನು ಹೇಳಬಯಸಿರಲಿಲ್ಲ. ಅವನು ಇವಳನ್ನು ಬಹು ಪ್ರೀತಿಸುತ್ತಿದ್ದನು. ಅದರಿಂದ ಅವನು ತನ್ನ ಮನಸನ್ನು ತಿರುಗಿಸಬಹುದೆಂದು ಭಾವಿಸಿ ಅವಳು ತನ್ನ ವಿಚಾರವನ್ನು ಅವನಿಗೆ ಹೇಳಬಾರದೆಂದು ನಿರ್ಧರಿಸಿದ್ದಳು.

ಹಾಗೆ ಸಂದರ್ಭವೊದಗಿ ಬಂದರೆ ಅವನು ತನ್ನ ದೇಶಕ್ಕೆ ಹೋದರೂ ಹೋಗಲೊಲ್ಲನೆಂಬ ವಿಚಾರವೂ ಅವಳದಿತ್ತು. ಆದರೆ ಅವನಿಗಿದೆಲ್ಲವೂ ಗೊತ್ತಾಗದಿರುವದು ಅನ್ಯಾಯವು; ಓಸ್ಕಾರನಿಗೆ ಎಲ್ಲವೂ ತಿಳಿಯಬೇಕಾದುದು ಅತ್ಯವಶ್ಯವಾದುದೆಂದು ವಿಚಾರಾಂತ್ಯದಲ್ಲಿ ಅವಳು ನಿರ್ಣಯಿಸಿದಳು.

ತಾಸುಗಳ ಮೇಲೆ ತಾಸು ಕಳೆಯುತ್ತಿವೆ. ಇಂದಂತೂ ಓಸ್ಕಾರನು ಬಂದೇ ಬರುವನೆಂಬ ದೃಢವಾದ ನಂಬಿಗೆಯಿದೆ ಅವಳಿಗೆ. ಅವನ

ದಾರಿಕಾಯುತ್ತಲೆ ಎಷ್ಟೋ ಕಪ್ಪು ಚಹಾ ಕುಡಿದಳು; ನಿನ್ನೆಯಿಂದ ಅವಳು ಊಟವನ್ನೆ ಮಾಡಿರಲಿಲ್ಲ, ವಾಡಿಕೆಯಂತೆ ಬರುವ ಹೊತ್ತಿಗೆ ಓಸ್ಕಾರನು ಬಂದನು. ಎದ್ದು ಹೋಗಿ ಬಾಗಿಲವನ್ನು ತೆರೆಯುವಷ್ಟು ತ್ರಾಣವು ಅವಳಲ್ಲಿರಲಿಲ್ಲ; ತತ್ತರಿಸುತ್ತ ಬಾಗಿಲ ತೆರೆದಳು.

ಅವನು ಬಾಗಿಲಡಲ್ಲಿ ಕಾಲಿಡುವದು ಎರಡನೆಯ ಸಲ. ಅಗ್ಗಿಷ್ಟಿಗೆಯ ಮುಂದೆ ಅವಳ ಬದಿಗೆ ಕುಳಿತನು. ಮುಖವು ಬಿಳುಪೇರಿತ್ತು. ತುಟಿ ಒಣಗಿದ್ದವು. ಬಾಯಿ ಆರಿತ್ತು. ಗಂಟಲು ಕಟ್ಟಿತ್ತು.

'ಓಸ್ಕಾರ್, ನಿನಗೇನಾಗಿದೆ?'

'ಏನೂ ಇಲ್ಲ, ಅಂಜಬೇಡ. ನಿನ್ನ ಮುಂದೆ ಒಂದು ಮಾತನ್ನು ಹೇಳಬಂದಿದ್ದೇನೆ.'

'ಹೇಳು, ಅದಾವುದು? ಕೇಳಲು ಸಿದ್ಧಳಿದ್ದೇನೆ.'

'ನನಗೆ ಅಪ್ಪಣೆಯು ಬಂದಿದೆ. ನಾಳೆ ಮುಂಜಾನೆ ನಾನು ಹೊರಡಬೇಕು.'

'ನಾಳೆ ಮುಂಜಾನೆಯೇ?'

'ಹೌದು, ಕೊನೆಯ ತಂಡದೊಂದಿಗೆ. ಅಂದರೆ ಯಾರೂ ಉಳಿಯುವದಿಲ್ಲ. ಕ್ಯಾಂಪು ಬರಿದೋ ಬರಿದಾಗುವದು ನಾಳೆ.'

ಮೋನಳ ಹೃದಯವು ಕಂಪಿಸಿತು. ಅದನ್ನು ತಡೆಯುವದಕ್ಕಾಗಿ ಏನೋ ಒಂದು ಪ್ರಶ್ನೆಯನ್ನು ಅವಳು ಕೇಳಿದಳು: 'ಜನರು ಏನನ್ನುತ್ತಾರೆ?' ಎಂದು.

ಅವನು ಖೊಳ್ಳೆಂದು ನಕ್ಕನು. ಮಾತಾಡಿದ ಶಬ್ದಗಳ ಅರ್ಥ ಸ್ಪಷ್ಟವಾಗಿ ತಿಳಿಯಲಿಲ್ಲ. 'ಜನರೇ ಮತ್ತೆ ಬೇಗನೆ ಇಲ್ಲಿಗೆ ತಿರುಗಿ ಬರಬಹುದು. ಇಂಗ್ಲಂಡದಲ್ಲಿಯೇ ಇರಬೇಕೆನ್ನುವರು; ಕಿಕ್ಕಿರಿದು ತುಂಬಿದ ದೇಶಕ್ಕೆ ಅವರು ಕಳಿಸಲ್ಪಟ್ಟಿದ್ದಾದರೆ, ಅಲ್ಲಿ ಹೊಟ್ಟೆಗಿಲ್ಲದೆ ತೊಳಲಿಬಳಲಿ ಇಲ್ಲಿಗೆ ಹೃದಯದಲ್ಲಿ ದ್ವೇಷವನ್ನಿರಿಸಿಕೊಂಡು ಮತ್ತೆ ಬರಬಹುದು.'

'ಅಂದರೆ ಬೇಗನೆ ಇನ್ನೊಂದು ಯುದ್ಧವಾರಂಭವಾಗುವದೇ?'

'ಆಗೇ ಆಗುವದು. ದೇವರಿದ್ದಾನೆ ಜಗತ್ತನ್ನೂ, ಜನರನ್ನೂ ರಕ್ಷಿಸುವವನು.'

ಉದ್ರೇಕಗೊಂಡ ಮೋನನ ವಿಚಾರವು ಬೇರೆಯಿತ್ತು. ಆದರೆ ಮಾತಾಡಲು ಬಾಯಿಬರಲೊಲ್ಲದು. ಓಸ್ಕಾರನಾದರೂ ಹೊತ್ತು ಹೋಗಲಾರದೆಂದು ಮಾತಾಡುತ್ತಿದ್ದನು.

'ಯುದ್ಧ ಮುಗಿಯಿತು; ಅದಕ್ಕಿಂತಲೂ ಹೀನವಾಗಿದೆ—ಈ ಶಾಂತಿ ಸಂಧಾನ ಪರಿಷತ್ತು. ಸೈನಿಕನ ಕತ್ತಿಯು ಝಳಪಿಸುತ್ತಿರುವಾಗ ಶಾಂತಿಯೆಲ್ಲಿದೆ? ಜಗತ್ತು ಲಯವಾಗುತ್ತಿದೆ! ಎಂಥ ಠಕ್ಕುತನ! ಏನು ಬಲಿ! ಏನು ತತ್ವಜ್ಞಾನೋಪದೇಶ! ಇದೆಲ್ಲ ಮೋಸಗಾರಿಕೆಯ ಬಾಹ್ಯ ವೇಷವನ್ನು ತೊರೆದು ಜನಾಂಗಗಳು ಪ್ರಾಮಾಣಿಕರೇಕಾಗಬಾರದು? ನಾನು ಹೇಳಬಂದುದು ಇದಲ್ಲ ಮತ್ತೆ—ತಿಳಿಯಿತೇ?'

'ಮತ್ತೇನದು ಓಸ್ಕಾರ್?'

'ಮೋನಾ, ನಾನು ನಿನ್ನ ಎದೆಗುಂದಿಸುವದಿಲ್ಲ. ನೀನೂ ನನ್ನ ಕೈಕಾಲುಗೆಡಿಸಬೇಡ. ನನ್ನ ಅಪರಾಧವೂ ಬಹಳಿದೆ. ನಿನ್ನನ್ನು ಬಿಟ್ಟು ನಾನು ಹೋಗಲಾರೆ. ನೀನೇ ನನ್ನ ಸರ್ವಸ್ವ. ಅದನ್ನು ಬಿಟ್ಟು ಹೋಗುವದೆಂದಿಗಾದರೂ ಸಾಧ್ಯವೇ?'

'ಓಸ್ಕಾರ್, ಸರಕಾರದವರು ಒತ್ತಾಯಪಡಿಸಿ ನಿನ್ನನ್ನು ಹೊತ್ತು ಹಾಕಿದರೆ?'

ಓಸ್ಕಾರನು ನಕ್ಕನು. ವಿಕಾರವಶನಾಗಿ ಹುಚ್ಚುನಗೆಯ ಹೊಳೆಯನ್ನೆ ಹರಿಸಿದನು.

'ಒತ್ತಾಯ ಪಡಿಸುವದೆ? ತನ್ನಲ್ಲಿ ಧೈರ್ಯವಿದ್ದರೆ ಯಾರೂ ಒತ್ತಾಯ ಪಡಿಸಲಾರರು.'

'ಧೈರ್ಯವೇ?'

'ಹೌದು, ಧೈರ್ಯವು. ಏನು ಹೇಳಲು ಬಂದಿರುವೆನೆಂಬುದು ಅರ್ಥವಾಗಲಿಲ್ಲವೇ? ನನ್ನ ವಿಚಾರವನ್ನು ನೀನು ಕೇಳಿಕೊಂಡು, ಅಂಜಿ ನನ್ನನ್ನು ಆ ವಿಚಾರಗಳಿಂದ ತಿರುಗಿಸಬಹುದೆಂದು ನಾನು ನಿನ್ನ ಮುಂದೆ

ಆ ಮಾತನ್ನು ತೆಗೆಯಬಾರದೆಂದು ಸುಮ್ಮಗಿದ್ದೆನು. ಆದರೆ ಇಂದು ಅಪ್ಪ ಣೆಯು ಬಂದೊಡನೆ ನನ್ನಷ್ಟಕ್ಕೆ ನಾನಂದುಕೊಂಡೆ 'ಇಲ್ಲ. ಏನೋ ಹಲವು ಹೆಂಗಸರಂತೆ ಅವಳಿಲ್ಲ. ಅವಳ ಎದೆಗಟ್ಟಿಯಿದೆ ಅದಲ್ಲದೆ ನಮಗೆ ಬೇರೆ ಯಾವ ದಾರಿಯಿಲ್ಲೆಂಬುದು ಅವಳಿಗೂ ಗೊತ್ತಿದೆ....'

ಏನು ಹೇಳುತ್ತಾನೆಂಬದನ್ನು ಕೇಳಲು ಮೋನಳ ಆತುರತೆ ಹೆಚ್ಚಾಗಿ 'ಏನು ಹೇಳದು? ನನಗೆ ಗೊತ್ತಿರುವದೊಳಿತು. ಓಸ್ಕಾರಾ, ನನ್ನಿಂದ ಬಚ್ಚಿಡುವಿಯಾ?' ಎಂದು ವಿಚಾರಿಸಿದಳು.

ಆದರಿಂದ ಅವಳ ಸನಿಯಕ್ಕೆ ಇನ್ನಿಷ್ಟು ಸರಿದು ಗೋಡೆಗಳು ಕಿವಿಗೊಡುವವೆಂದು ಬಗೆದು ಅವಳ ಕಿವಿಯಲ್ಲಿಯೇ ಗುಟ್ಟಾಗಿ ಕೇಳಿದನು.

'ನನ್ನನ್ನು ಅವರು ಹುಡುಕುವದರಲ್ಲಿಯೇ ನಾನು ಎಲ್ಲಿಗಾದರೂ ಹೋಗುವೆನು, ತಿಳಿಯಿತೇ? ಕೊನೆಯ ಬೆಟ್ಟಿತೆಗೆದುಕೊಂಡು ಹೋಗ ಬೇಕೆಂದು ಈಗ ಬಂದಿರುವೆನು. ಮೋನಾ, ಇದೇ ನನ್ನ ನಿನ್ನ ಕಟ್ಟ ಕಡೆಯ ದರ್ಶನವು.'

ಅವನು ಅವಳ ಮುಖವನ್ನು ನೋಡಿದನು. ಅಳುಮೊಗವಾಗಿ ದ್ದಿತು. ಅಗಲುವಿಕೆಯಿಂದಾಗುವ ವ್ಯಥೆಯು ಕಂಬನಿ ರೂಪದಿಂದ ಹೊರ ಬಿದ್ದಿತು.

'ಓಸ್ಕಾರ್, ನೀನು ನನ್ನನ್ನು ಬಿಟ್ಟು ಹೋದ ಮೇಲೆ ನಾನಿರು ವುದು ಕಷ್ಟಕರವಾಗದೆಂದು ತಿಳಿದುಕೊಂಡಿರುವಿಯಾ' ಎಂದು ಕೇಳಿದಳು.

ಅವನ ಕಣ್ಣೀರು ತುಳುಕಿದವು. ಹೃದಯವು ಕರಗಿತು. ಅಂತಃಕರ ಣವು ಉಕ್ಕೇರಿಬಂದಿತು.

'ನೀನಿಲ್ಲದಿದ್ದರೆ ನನ್ನ ಗತಿಯೇನಾಗುವದು ಬಲ್ಲೆಯಾ?'

'ಮೋನಾ, ಈ ಪ್ರಶ್ನೆಗೆ ಏನೆಂದು ಉತ್ತರಕೊಡಲಿ' ತಿಳಿಯು ದಾಗಿದೆ.

'ಆದರೆ ನೀನು ಅನಿವಾರ್ಯವಾಗಿ ಒಂದು ವೇಳೆ ಹೋಗಲೇ ಬೇಕಾಗಿ ಬಂದರೆ ನಾವಿಬ್ಬರೂ ಕೂಡಿಯೇ ಹೋಗಲು ಯಾವ ಹಾದಿಯೂ ಇಲ್ಲವೇ?'

'ಕೂಡಿಯೇ?' ಎಂದು ಅವಳ ಮುಖವನ್ನು ಶೋಧ ಬುದ್ಧಿಯಿಂದ ನೋಡಿದನು.

ಅವಳು ಅವನ ಕೈಯಲ್ಲಿ ಕೈಹಾಕಿದಳು. ಇಬ್ಬರ ಕೈಗಳೂ ನಡಗುತ್ತಿದ್ದವು.

'ಓಸ್ಕಾರ್, ಹೋರಿಗಳ ಕಾದಾಟವು ನಿನ್ನ ನೆನಪಿನಲ್ಲಿದೆಯೇ? ಹಳೆಯ ಹೋರಿಗಳು ಹೊಸದನ್ನು ಜೀವಿಸಗೊಡಲಿಲ್ಲ. ಅದಕ್ಕೆ ಅದೇನು ಮಾಡಿತೆಂಬುದನ್ನು ನೀನು ಮರೆತಿರಲಾರಿ' ಎಂದಳು ಮೋನಾ.

ಅವಳು ಮುಖವನ್ನೆತ್ತಲಿಲ್ಲ. ಅವನು ದೀರ್ಘವಾಗಿ ಉಸಿರ್ಗರೆಯುತ್ತಿದ್ದನು. ಅವಳು ಕಣ್ದೆರೆದು ಅವನನ್ನು ನೋಡಿದಳು. ಕ್ಷಣ ಹೊತ್ತು ಅವರು ಸುಮ್ಮಗಿದ್ದರು. ಆ ಮೇಲೆ ಅವನು 'ದೇವಾ! ಏನದು ಮೋನಾ! ಆ ವಿಚಾರವೆ? ಅದೇ ಅಹುದಲ್ಲೋ?'

'ಅಹುದು. ಅದೇ..ಅದೇ.'

ಆ ಮೇಲೆ ತಾನು ಕಲ್ಪಿಸಿದ ತನ್ನ ದೈವೀ ಸಂಕಲ್ಪವನ್ನು ಅವನಿಗೆ ವಿವರಿಸಿ ಹೇಳಿದಳು. ಅವನ ಮುಖವು ಕಳೆದುಂಬಿತು. ಅವಳ ಆ ಕನಸು ಮೂರ್ತೀಭವಿಸಹತ್ತಿತು.

'ನಾವೂ ಆತನಂತೆ ಮಾಡುವದು ಮೂರ್ಖತನದ್ದಾಗುವದೆನ್ನುವಿಯಾ?'

'ಇಲ್ಲ, ಇಲ್ಲ. ಮೋನಾ, ದೇವರು ಸ್ವರ್ಗದಲ್ಲಿರುತ್ತಾನೆ.'

ಜಗತ್ತಿನಿಂದ ತಳ್ಳಲ್ಪಟ್ಟ ಎರಡು ಎಳೆಯ ಜೀವಗಳು ಒಂದುಕ್ಕೊಂದು ಅಂಟಿಕೊಂಡು ಸಾವಿನ ದೀಕ್ಷೆಯನ್ನು ಹೊಂದಿದವು. ಯುದ್ಧ ಶಾಂತಿಗಳ ಬಗ್ಗೆ ಅದೆಷ್ಟೊ ಮಾತಾಡಿಕೊಂಡರು. ತಾವು ನಿರ್ಧರಿಸಿದುದರ ಹೊರತು ಬೇರೆ ಫಲವು ದೊರೆಯದೆಂದು ಶಾಂತಿಪಾಠವನ್ನು ಜಗತ್ತಿನಲ್ಲಿ ಬೀರುವ ಬಂಟರಂತೆ ಪ್ರಾಣಾರ್ಪಣೆಗೆ ಸಿದ್ಧರಾದರು.

---

# ಪ್ರೇಮಸಮಾಧಿ

ಮೂರನೆಯ ದಿನ ಬೆಳಗು ಮುಂಜಾವು ೫ ಗಂಟೆಗೆ ತರುಣ–ತರುಣಿಯರಿಬ್ಬರು ಕ್ಯಾಂಪು ಮತ್ತು ಸಮುದ್ರದ ಮೇರೆಯ ಗುಡ್ಡವನ್ನು ಏರತೊಡಗಿರುವರು. ಮುಸುಕು ಕಂದಿಯ ಬಣ್ಣದ ಆಕಾಶ; ಕಡೆಕಡೆಯ ನಕ್ಷತ್ರಗಳೂ ಒಂದೊಂದೇ ಮರೆಯಾಗುತ್ತಲಿವೆ. ಮುಂಜಾವು ಬಹು ಪ್ರಶಾಂತವಾಗಿದೆ. ನೆರೆಹೊರೆಯ ಒಕ್ಕಲುಮನೆಗಳಲ್ಲಿಯ ಕೋಳಿಗಳ ಕೂಗಾಟ ಕೇಳುತ್ತಿದೆ. ನಾಯಿಗಳೂ ಬೊಗಳುತ್ತವೆ. ಹಕ್ಕಿಗಳ ಚಿಲಿಪಿಲಿಯು ಇನ್ನೂ ಮೊದಲಾಗಿರಲಿಲ್ಲ. ಮುಂಜಾವಿನ ತಂಗಾಳಿಯು ಮಾತ್ರ ಸ್ವಚ್ಛಂದವಾಗಿ ಸುಳಿಯುತ್ತಿದೆ.

ಇಬ್ಬರೂ ಜೊತೆಯಾಗಿ ಹೊರಟಿದ್ದಾರೆ. ಮುಖಗಳು ಒಬ್ಬರೊಬ್ಬರಿಗೆ ಸ್ಪಷ್ಟವಾಗಿ ಕಾಣಬರದಷ್ಟು ಕತ್ತಲೆ. ಕೈಯಲ್ಲಿ ಕೈ ತೊಡಕಿಸಿದ್ದಾರೆ—ಮೂರು ಕಾಲಿನ ಪಂದ್ಯಾಟದಂತೆ. ಮಂದವಾಗಿ ಹೆಜ್ಜೆ ಬೀಳುತ್ತವೆ. ಇನ್ನೂ ಕತ್ತಲು ಹರಿಯದ್ದರಿಂದ ಸಾವಕಾಶವಾಗಿ ದಿನ್ನೆಯನ್ನೇರುತ್ತ ಸಾಗಿದ್ದಾರೆ; ಏರುವಾಗ ಉಸಿರುಕಟ್ಟಿದಂತಾಗುವದರಿಂದ ಕೆಲವು ಹೆಜ್ಜೆ ಸಾಗಿದ ಮೇಲೆ ನಿಂತು ನಿಂತು ಮುಂದುವರಿಯುತ್ತಾರೆ. ತಮ್ಮ ಪಯಣವು ಹೆಚ್ಚು ಹೊತ್ತು ಹಿಡಿಯಲೆಂದು ಆದಷ್ಟುಮಟ್ಟಿಗೆ ಸಾವಕಾಶವಾಗಿ ಸಾಗುವದೆಂದು ಗೊತ್ತುಮಾಡಿಕೊಂಡಂತೆ ಮಂದಗಮನದಿಂದ ಸಾಗಿದ್ದರು. ಅದೇ ಅವರ ಮೊದಲ ಪಯಣ; ಕೊನೆಯದೂ ಆಯಿತು.

'ಓಸ್ಕಾರ್, ನನ್ನನ್ನು ಕ್ಷಮಿಸು' ಎಂದು ಮೋನಳು ವಿನಯದಿಂದ ಬಿನ್ನವಿಸಿಕೊಂಡಳು. ಸಲಿಗೆಯ ಸಥಿಯೂ ಕಡಿಮೆ ಇರಲಿಲ್ಲ.

'ಕ್ಷಮಿಸುವ ಹಾಗೇನಿದೆ ಇಲ್ಲಿ? ಮೋನಾ, ಯಾರು ಯಾರನ್ನು ಕ್ಷಮಿಸಬೇಕು ಹೇಳು? ಹೀಗಾಗಬೇಕಾದ್ದೆ ಇತ್ತು.'

'ಹೌದು. ಆಗಬೇಕಾದುದೇ ಆಯಿತಲ್ಲವೇ? ಬೇರೆ ದಾರಿ ನಮಗೆ ದೊರೆಯಲಿಲ್ಲ. ಯಾವದಾದರೂ ಇತ್ತೇನು ಮತ್ತೆ?'

‘ಇಲ್ಲ. ಇಲ್ಲ. ಇದರ ಹೊರತು ಬೇರಾವ ದಾರಿಯೂ ನಮಗೆ ದೊರೆಯಲಿಲ್ಲ. ಇದೇ ನಮ್ಮ ಹೆದ್ದಾರಿ’ ಎಂದನು. ಪ್ರಶ್ನೋತ್ತರಮಾಲಿಕೆಗಳಲ್ಲಿಯೇ ಎಷ್ಟೋ ಮೇಲೇರಿ ಬಂದಿದ್ದರು.

ಉಳಿದಷ್ಟರಮಟ್ಟಿಗೆ ಕ್ಯಾಂಪಿನಲ್ಲಿ ಯಾವ ಸುಳಿವು ಇನ್ನೂ ಕಾಣಬರಲಿಲ್ಲ. ಅಷ್ಟರಲ್ಲಿಯೇ ಮೋನಾ–ಓಸ್ಕಾರರಿಬ್ಬರೂ ಹುಲ್ಲುಗಾವಲದ ದಾರಿಯವರೆಗೆ ಬಂದು ಮುಟ್ಟಿದರು. ಗುಡ್ಡದ ಅರ್ಧ ದಾರಿಯನ್ನು ಇನ್ನೂ ಅವರು ದಾಟಿರಲಿಲ್ಲ. ಅಷ್ಟರಲ್ಲಿ ಕೆಳಗಡೆಗೆ ಕಾಣುವ ಕಪ್ಪು ಭೂಮಿಯ ಕಡೆಯಿಂದ ಸಪ್ಪಳವು ಬರತೊಡಗಿತು. ಅವರು ಅತ್ತ ಕಡೆಗೆ ಮುಖ ಹೊರಳಿಸಿ ನೋಡಿದರು. ಅವರ ಕಣ್ಣಿಗೆ ಇನೆಯ ಕಂಪೌಂಡಿನಲ್ಲಿ ಮಸಕು–ಮಸಕಾಗಿ ಕಾಣುವ ಮನುಷ್ಯರ ಆಕೃತಿಗಳು ಕಂಡುಬಂದವು· ಬ್ಯೂಗಲಿನ ಧ್ವನಿಯೂ ಆಯಿತು. ಕಟ್ಟಕಡೆಯ ತಂಡವು ಒತ್ತಟ್ಟಿಗೆ ಸೇರಬೇಕೆಂಬ ಸೂಚನೆಯಿದ್ದಿರಬಹುದು. ಬೆಳಕು ಹೆಚ್ಚಾಯಿತು. ಗಂಟೆಯ ಗಣಗಣ ನಾದವು ವಾತಾವರಣವನ್ನು ನಿನದಿಸಿತು. ಓಸ್ಕಾರನು ತಪ್ಪಿಸಿಕೊಂಡಿರುವನೆಂದು ಆ ಗಂಟೆಯ ನಾದವು ಸಾರಿ ಹೇಳುತ್ತಿತ್ತೋ ಏನೋ.

‘ಇದು ನನ್ನ ಸಲುವಾಗಿ ನೋಡು ಮೋನಾ’ ಎಂದು ಓಸ್ಕಾರನೆಂದನು. ಇಬ್ಬರೂ ತುಸು ಹೊತ್ತು ನಿಂತರು.

ಇಷ್ಟು ಹೊತ್ತಿಗೆ ಅವರು ಗೋಪುರದ ಸುತ್ತಲಿರುವ ಸ್ಮಶಾನದ ಗೋಡೆಯ ಹತ್ತಿರಕ್ಕೆ ಬಂದಿದ್ದರು. ಯಾರ ಕಣ್ಣಿಗೂ ಬೀಳಬಾರದೆಂದು ಗೋಡೆಯ ಮರೆಯಲ್ಲಿ ಅಡಗಿದರು.

ಕೆಲವು ನಿಮಿಷಗಳ ವರೆಗೆ ಮೌನವು ಭಂಗವಾಗಲಿಲ್ಲ. ಆದರೆ ಇತ್ತ ಕ್ಯಾಂಪಿನಲ್ಲಿಯ ಕಡೆಯ ಕಪ್ಪನ್ನ ಉಡುಪಿನ ತಂಡದವರು ಸಾಲಾಗಿ ಹೊರಡಲನುವಾಗಿದ್ದರು; ಅವರ ಎರಡೂ ಬದಿಗೆ ಹಳದಿಬಣ್ಣದ ಉಡುಪಿನ ಕಾವಲುಗಾರರು. ತಮ್ಮ ಕಂಪೌಂಡಿನ ಸ್ಥಳವನ್ನು ಕೊನೆಗೊಮ್ಮೆ ಬಿಟ್ಟು ಮುಂದೆ ಸಾಗಿದರು.

‘ಅವರು ನನ್ನನ್ನು ಮರೆತಿದ್ದಾರೆ; ದುರ್ಲಕ್ಷಿಸಿದಂತೆ ಕಾಣುವದು’

ಎಂಬ ಓಸ್ಕಾರನೆಂಬವನು. ಇಬ್ಬರೂ ಸ್ಫೂರ್ತಿಯಿಂದ ಉಸುರಾಡಿಸ ಹತ್ತಿದರು. ಅಧಿಕಾರಯುಕ್ತವಾಣಿಯ ಗರ್ಜನೆಯು ದೂರದಿಂದಲೆ ಕೇಳ ಬಂದಿತು. ತಂಡದ ಕಡೆಯ ೫೫೦ ಜನರ ಸೆರೆಪಣಿಗೆಯು ಒಂದೊಂದು ಬಾಗಿಲವನ್ನು ದಾಟುತ್ತ ಮುಖ್ಯ ಬೀದಿಗೆ ಕಾಲಿಕ್ಕಿದುದು ಅವರಿಗೆ ಸಿಚ್ಚಳಾಗಿ ಕಂಡಿತು. ರಫ್ ರಫ್ ಎಂಬ ಕಾಲಪಪ್ಪಳವು ಒಂದೇ ತಾಳ ದಲ್ಲಿ ದನಿಗೂಡಿಸಿತ್ತು. ಕೊನೆಯ ಬಾಗಿಲು—ಸೆರೆಮನೆಯ ವಾಸದ ಹೆಬ್ಬಾ ಗಿಲವನ್ನು ತಂಡವು ದಾಟಿತು. ಅವರು ಪರಿ ಉಕ್ಕಿದ ಹಾದಿನಂತಾಗಿ ಕೇಕೆಯನ್ನು ಹಾಕಿದರು. ಬಿಡುಗಡೆಯ ಆನಂದವು ಅವರನ್ನು ಸಂತೋಷ ಸಾಗರದಲ್ಲಿ ಈಸಾಡಹಚ್ಚಿತು. ಮನಬಂದಂತೆ ಕೂಗಾಡಿದರು; ಕಡೆಗೆ ಹಾಡನ್ನು ಸ್ವರಮೇಳದವರಂತೆ ಹಾಡತೊಡಗಿದರು. ಅವರನ್ನು ಈಗ ಹಿಡಿದವರಾರು ?

'ಪೂರ್ವಜರ ಶೂರತನದಮಲ ಕೀರ್ತಿಯು
ನಾವವರ ಗುಣಂಗಳ ವ್ಯೈವೆತ್ತ ಮೂರ್ತಿಯು.

* * * *

ತಂದೆ ನಾಡಿಗಾಗಿಯೆ ತನುಮನವ ಸೂರೆಗೈವೆವೋ
ಬಂದಂಥ ಕೇಡುಗಾಲವ ಧೈರ್ಯದಿಂ ಕಳೆವೆವೋ.

ಎಂಬ ಪದ್ಯವನ್ನು ಗಂಟಲು ಹರಿಯುವ ದನಿಯಿಂದ ಹಾಡುತ್ತ ಮುಂದೆ ಮುಂದೆ ಸಾಗಿದ್ದರು.

ಕೆಲಕಾಲದ ನಂತರ ಆ ಕರ್ರಗಿನ ಆಕೃತಿಗಳ ಸಮೂಹವು ಗಿಡ ಗಳಲ್ಲಿ ಮರೆಯಾಯಿತು. ಆ ತಂಡವು ಕರ್ಕಪ್ಯಾಟ್ರಿಕ್ಕಿನ ಮೂಲೆಗೆ ಹೊರಳಿದ್ದರಿಂದ ಅವರ ಆ ಗಡಸು ಧ್ವನಿಯೂ ಕೇಳದಂತಾಯಿತು.

ಆ ತಂಡದ ೫೫೦ ಜನರು ಹೊರಹಾಕಲ್ಪಟ್ಟರು. ಇಷ್ಟವಿಲ್ಲದ ತಮ್ಮ ದೇಶಕ್ಕೆ ಅವರು ಹೋಗಲೇಬೇಕೆಂಬ ರಾಜಾಜ್ಞೆ. ತಮ್ಮ ದೇಶಕ್ಕೆ ಇವರೂ ಬೇಕಿದ್ದಿಲ್ಲ. ನಾಲ್ಕುವರುಷಗಳ ವರೆಗೆ ಅವರ ತುರಂಗವಾಗಿದ್ದ ಆ ಕ್ಯಾಂಪು ಈಗ ಬರಿದಾಗಿ ಹಾಳು ಹಾಳು ಸುರಿಯುತ್ತಿದೆ. ಆ ಕ್ಯಾಂಪು

ಈಗ ಸೂರ್ಯಪ್ರಕಾಶದಲ್ಲಿ ಹಸಿರು ಮುರಿಯುವ ಗುಡ್ಡದ ಹಣೆಗೆ ಕಪ್ಪುಬಟ್ಟೆಸಂತೆ ಕಾಣುತ್ತದೆ.

ಒಮ್ಮೆಂದೊಮ್ಮೆ ಮೋನಳಿಗೆ ಒಂದು ವಿಚಾರವು ಹೊಳೆಯಿತು ಇನ್ನೂ ತಾವು ಸಾವನ್ನು ತಪ್ಪಿಸಿಕೊಳ್ಳಬಹುದೆಂದು. ಜೀವನವು ಭೋಗಿಸಲು ಪರಿಪಕ್ವತೆಯನ್ನು ಇದೀಗ ಪಡೆದಿತ್ತು. ಕೊನೆಯ ಸಮಯವಾದರೂ ಬದುಕಿ, ಬಾಳುವ ಆಶೆಯು ಎಂದಿಗೂ ಅಳಿಯಲಾರದು.

'ಓಸ್ಕಾರ್, ಅಧಿಕಾರಿಗಳು, ಕಾವಲುಗಾರರು—ಎಲ್ಲರೂ ಇಲ್ಲಿಂದ ಹೊರಟುಹೋಗಿರುವರು. ಎಲ್ಲಿಗಾದರೂ ತಪ್ಪಿಸಿಕೊಂಡು ಹೋಗಿ ನಾವು ಜೀವಿಸಲು ಸಾಧ್ಯವಾಗಲಾರದೇ? ಯಾರಿಗೂ ಗೊತ್ತಾಗದಂತೆ ಎಲ್ಲಿಗಾದರೂ ಹೋಗಿ ಬಾಳಿನ ಸವಿಯನ್ನುಣ್ಣಲು ಆಸ್ಪದ ದೊರೆಯುಲಾರದೇ? ಅಂಥಲ್ಲಿಗೇಕೆ. . .ನಾವಿಬ್ಬರೂ. . ಹೋಗಬಾರದು?' ಎಂದು ಮೋನಳು ಮುಲುಗಿಸಿಯುಂಡ ಓಸ್ಕಾರನ ಕಿವಿಯಲ್ಲಿ ಮಾತನಾಡಿದಳು.

'ಸಾಧ್ಯವಿಲ್ಲ! ಮೋನಾ—ಅದು ಅಸಾಧ್ಯವಾದ ಮಾತು' ಎಂದು ಓಸ್ಕಾರನು ನಿರಾಶೆಯ ಸಿರ್ಘಾರದ ಉತ್ತರವನ್ನಿತ್ತನು.

'ಹೌದು, ಸಾಧ್ಯವಿಲ್ಲ. ನಮಗೆ ಇದೇ ಸಾಧ್ಯ'ವೆನ್ನುತ್ತ ಓಸ್ಕಾರನನ್ನು ಕಣ್ತುಂಬ ನೋಡಿದಳು. ದಾರಿಯು ಮಾತ್ರ ಮುಂದುವರಿಯುತ್ತಲೇ ಇತ್ತು.

ಆದರೆ, ಅದೇ ಹೊತ್ತಿಗೆ ಅವರ ಮತ್ತು ಸಮುದ್ರದ ನಡುವಿರುವ ಒಂದು ಗುಡಿಸಲಿನಿಂದ ಹೆಣ್ಣುಮಗಳು ಹಾಡುವ ಧ್ವನಿಯೊಂದು ಕೇಳಬಂದಿತು. ಅವಳಾರೆಂಬುದು ಮೋನಳಿಗೆ ಗೊತ್ತಾಯಿತು. ಅವಳ ಮೊದಲಿನ ಹೆಣ್ಣಾಳು. ಇತ್ತೀಚೆ ಒಬ್ಬ ಒಕ್ಕಲಿಗನೊಡನೆ ಅವಳ ಮದುವೆಯಾಗಿದೆ. ಆಕೆಯ ಗಂಡನು ಹೊಲದಲ್ಲಿ ಕೆಲಸಮಾಡಲು ಹೋಗಿರಬಹುದು; ಇತ್ತ ಇವಳು ಮನೆಯ ಮುಂದಿನ ಕೈತೋಟದೊಳಗಿನ ಹೇಂಟೆಯ ಮರಿಗಳನ್ನು ಹಿಡಿದು ತಂದು, ಬುಟ್ಟಿಯನ್ನು ಮುಚ್ಚಬೇಕೆಂದು ಯತ್ನಿಸುತ್ತಿದ್ದಳು. ಆಗ ಅವಳು ತನ್ನ ಬಾಳಿನ ಸೊಗಸಿನಿಂದ ಉಲ್ಲಸಿತಳಾಗಿ ಹಾಡತೊಡಗಿದ್ದಳು. ಅಂಥವಳದೆಷ್ಟು ಸುಖಿಯಾಗಿರುವುದೆಂಬುದು ಮೋನಳನ್ನು ಕರಗಿಸಿತು.

ತುಸು ಹೊತ್ತು ಮೋನಳ ಎದೆಯೊಡೆದು ನೀರಾಯಿತು. ನಿನ್ನೆ ಜಿದ್ದಂಥ ದೊಡ್ಡ ದೊಡ್ಡ ಹಳಪಂಡದ ವಿಚಾರಲಹರಿಗಳನ್ನು ಮರೆತಳು. ಉಳಿದ ಹೆಣ್ಣುಮಕ್ಕಳು ಸಾದಾ ರೀತಿಯಿಂದ ಭೋಗಿಸುವ ಸುಖಗಳಿಗೂ ತಾನು ಎರವಾದಳೆಂಬ ದುಃಖವು ಮೋನಳಿಗೆ ಒತ್ತರಿಸಿ 'ದೈವದುರ್ವಿ ಪಾಕವಲ್ಲದೆ ಮತ್ತೇನು' ಎಂದು ನುಡಿದಳು.

'ನೀನು ಪಶ್ಚಾತ್ತಾಪ ಪಡುತ್ತೀಯಾ ಮೋನಾ' ಎಂದು ಅವಳನ್ನು ಎವೆಪಿಳುಕಿಸದೆ ನೋಡಹತ್ತಿದನು. ಮರುಕ್ಷಣದಲ್ಲಿಯೆ ಅವಳು ತನ್ನ ಮೊದಲಿನ ಶಕ್ತಿಯನ್ನು ತಂದುಕೊಂಡಳು. ಅವಳಿಗೆ ಪಶ್ಚಾತ್ತಾಪವಾಗಿರ ಲಿಲ್ಲ; ಭಗ್ನಮನೋರಥಳಾಗಿದ್ದಳು.

'ಅಹಾ! ಆಗಬೇಕೆಂದು ಬಯಸಿದುದು ಬೇರೆ; ಆದದ್ದು ಬೇರೆ! .. ಈಗ..ಆಯಿತು ಹಾಗೆ! ನನ್ನ ಭವ್ಯವಾದ ಆಶೆ, ಜೀವನದ ಸೊಗಸಾದ ತಿಳಿವಳಿಕೆಗೆ ಎಡೆಯಿಲ್ಲದಾಯಿತು.'

'ಹೌದು. ಆಶೆ-ಆಕಾಂಕ್ಷೆಗಳ ತರ್ಪಣವನ್ನೇ ಬಿಟ್ಟು ಸಾಯುಜ್ಯ ಮುಕ್ತಿಯನ್ನು ಪಡೆಯೋಣ'ವೆಂದು ಓಸ್ಕಾರನು ಮೋನಳನ್ನು ಬಲ ವಾಗಿ ತಬ್ಬಿಕೊಂಡು ಮುಂಗೈಯನ್ನು ಮುದ್ದಿಸಿದನು.

ಇಬ್ಬರೂ ಕೈಗಳನ್ನು ಗಟ್ಟಿಮುಟ್ಟಿಯಾಗಿ ಹಿಡಿದುಕೊಂಡು ದಿನ್ನೆ ಯನ್ನು ಹತ್ತುತ್ತಲೇ ಇದ್ದರು; ಆದರೆ ಮಾತು ಮಾತ್ರ ಆಗೊಂದು ಈಗೊಂದು. ಕಾಲಿಗೆ ಕಲ್ಲು ತಾಕಿ ಅವಳು ಎಡವಿದಳು; ಓಸ್ಕಾರನು ಅವಳನ್ನು ಬೀಳಗೊಡದಂತೆ ಆಸರವಿತ್ತನು. ಟಿಟ್ಟಿಭವು ತನ್ನ ಸ್ವಚ್ಛಂದ ಸಂಗೀತವನ್ನಾರಂಭಿಸಿತು. ಜಾನ್‌ಕಾರ್ಲೆಟನ ಹೊಲದಲ್ಲಿಯ ಕುರಿಗಳ 'ಬ್ಯಾ' ಶಬ್ದವೂ ಕೇಳಲಾರಂಭಿಸಿತು. ಕೆಂಪುಮುರಡಿಗಳಿಂದ ರಕ್ಷಿಸಲ್ಪಟ್ಟ ಪೀಲ್‌ಪಟ್ಟಣವು ಸಮೀಪದಲ್ಲಿಯೇ ಕಂಡಂತೆ ಆ ಎತ್ತರದ ಸ್ಥಳದಿಂದ ಅವರಿಬ್ಬರ ಕಣ್ಣಿಗೆ ಕಂಡಿತು. ಪಟ್ಟಣದ ಮನೆಗಳೊಳಗಿಂದ ಹೊಗೆಯು ಏಳುತ್ತಿತ್ತು.

'ಓಸ್ಕಾರ್, ಜನರ ಹೃದಯದಿಂದ ಹೊಟ್ಟೆಕಿಚ್ಚು, ದ್ವೇಷವು ಅಳಿದು ಹೋಗಿರುವದೆಂದು ಕೆಲಹೊತ್ತು ಗ್ರಹಿಸೋಣ. ಇಷ್ಟೆಲ್ಲವೂ

ಆದಮೇಲೆ, ಒಬ್ಬರಿಗೊಬ್ಬರು ಯುದ್ಧವನ್ನು ಇನ್ನೆಂದೂ ಹೂಡಲಾರ ರೆಂದು ನೀನು ನಂಬಿರುವಿಯಾ?' ಎಂದು ಮೋನಳು ಪ್ರಶ್ನಿಸಿದಳು.

'ಹೌದು, ಮೋನಾ. ಇನ್ನು ಮುಂಬರುವ ದಿನಗಳಲ್ಲಿ ಯುದ್ಧ ಹೂಡಿದವರು ಮಾತ್ರ ತಮ್ಮ ಕಷ್ಟಕ್ಕೆ ತಾವೇ ಈ ಜಗತ್ತಿನಿಂದ ಇಲ್ಲದಾಗು ವದು ಖಂಡಿತ.'

'ನಮ್ಮ ಬಲಿದಾನವನ್ನು—ಆತ್ಮಸಮರ್ಪಣೆಯನ್ನು ದೇವರು ಸ್ವೀಕರಿಸುವನೆಂದು ನೀನು ತಿಳಿದುಕೊಂಡಿರುವಿಯಾ?'

'ಓಹೋ, ಸ್ವೀಕರಿಸದೆ–ಅತ್ಯಾನಂದದಿಂದ ಸ್ವೀಕರಸದೆ ಎಂದಿಗೂ ಇರಲಾರನು. ಯಾಕೆಂದರೆ, ಪವಿತ್ರಪ್ರೇಮಕ್ಕಾಗಿ, ಪ್ರೇಮಸಾಯುಜ್ಯ ಮುಕ್ತಿಗಾಗಿ ಜೀವನದ ಹಂಬಲವನ್ನು ತೊರೆದು ಪ್ರಾಣವನ್ನರ್ಪಿಸಿ ದ್ದೇವೆ. ಇಂಥದನ್ನು ಅವನು ಮರೆಯುವದು ಸಾಧ್ಯವೇ ಇಲ್ಲ.'

'ಹೌದು. ಅದು ನಿಜ. ಪ್ರೇಮಕ್ಕಾಗಿ ಎಲ್ಲವನ್ನೂ ತ್ಯಜಿಸಿ ಪ್ರಾಣಾ ರ್ಪಣಮಾಡಿದ್ದೇವೆ' ಎಂದು ಮೋನಳು ಓಸ್ಕಾರನ ಮಾತನ್ನೇ ಗಟ್ಟಿ ಯಾಗಿ ಅನ್ನುತ್ತ, ಕೈಯನ್ನು ಹಿಡಿಸಿಕೊಂಡು ಧೈರ್ಯವಾಗಿ ಮುಂದು ವರಿಯುಹತ್ತಿದಳು.

ಅವರು ಗುಡ್ಡದ ನೆತ್ತಿಯ ಮೇಲೆ ಬಂದು ನಿಂತರು. ಎಷ್ಟು ಸಾವ ಕಾಶವಾಗಿ ಹೆಜ್ಜೆಯನ್ನಿಕ್ಕುತ್ತ ಬಂದರೂ ಅವರ ಕೊನೆಯ ಪಯಣದ ನೀಮೆಗಲ್ಲು ಥುತ್ತೆಂದು ಬಂದಿತು. ಸಮುದ್ರರಾಜನ ಗರ್ಜನೆಯ ಗಡಗ ಡಾಟವು ದುರಗಮುರಗಿಯ ಲಡ್ಡಿನಂತೆ ಖಡಖಡವೆಂದು ಕೇಳಹತ್ತಿತು. ಇವರು ಗುಡ್ಡದ ತುದಿಯ ಮೇಲಿದ್ದರೂ ತೆರೆಗಳು ಅಪ್ಪಳಿಸುವದರಿಂದ ಏಳುತ್ತಿದ್ದ ತುಂತುರಗಳು ಅವರ ಮುಖವನ್ನು ತೊಳೆದವು. ಮೂಡಣ ದಿಂದ ಪಡುವಣಕ್ಕೆ ಅರ್ಧಚಂದ್ರಾಕಾರದಲ್ಲಿ ಸಮುದ್ರವು ಗಂಭೀರವಾಗಿ, ಕ್ರೂರವಾಗಿ, ತಣ್ಣಗಾಗಿ, ಶೋಭಾಯಮಾನವಾಗಿ, ಅಪರಂಪಾರವಾಗಿ ಕಂಗೊಳಿಸಿತು.

ಮೋನಳ ದೇಹವು ಅಂಗಾಲಿನಿಂದ ನಡುನೆತ್ತಿಯವರೆಗೆ ಚಳಿಬಂದ ವರಂತೆ ನಡುಗಹತ್ತಿತು. ಮೃತ್ಯುವಿನ ಪ್ರಥಮದರ್ಶನವು ಬೇಕಾದಂಥ

ಧೈರ್ಯವಂತರನ್ನೂ ಕೈಕಾಲುಗೆಡಿಸದೆ ಬಿಡಲಾರದು. ಅದರಲ್ಲಿ ಮೋನಳು ಅಬಲೆಯು. ಅವಳು ಬೆದರಿದುದು ಆಶ್ಚರ್ಯದ ಮಾತಲ್ಲ.

'ಓಸ್ಕಾರ್, ಇನ್ನೇನು ತಡವಾಗುವದಿಲ್ಲವಲ್ಲ!' ಎಂದಳು.

'ಇಲ್ಲ, ಮೋನಾ. ಇನ್ನೇನು ತಡವಾಗುವದಿಲ್ಲ. ಬಟ್ಟಲವು ತುಂಬಲಿದೆ.'

'ಉಳಿದಿರುವ ಅವಧಿಯಾದರೂ ಎಷ್ಟು?'

'ಬಟ್ಟಿನಿಂದೆಣಿಸುವಷ್ಟು ನಿಮಿಷಗಳು.'

'ಆ ಮೇಲೆ ನಾವಿಬ್ಬರೂ ಒಂದಾಗಿ, ಎಂದೆಂದಿಗೂ ಅಗಲದಂತೆ, ಜೊತೆಯಾಗಿ ಕೂಡಿರುವೆವಲ್ಲವೇ?'

'ಅಹುದು, ಮೋನಾ. ಎಂದೆಂದಿಗೂ ಹೊಂದಿಕೊಂಡಿರುವೆವು.'

'ನಮ್ಮ ಜೀವನದ ಕೊನೆಯ ಬಾಳಿನ ಉಳಿದ ಕೆಲವೆ ನಿಮಿಷಗಳ ಸಂಕಟಕ್ಕೆ ನಾನು ಎದೆಗುಂದುವದಿಲ್ಲ. ಯಾಕಂದರೆ ಮುಂದೆ ನಾನು ನಿನ್ನೊಡನೆ ಚಿರಂತನವಾಗಿ ಸುಖವನ್ನು ಪಡೆಯುವೆನಲ್ಲವೇ, ಓಸ್ಕಾರ್?' ಎಂದು ಮೋನಳು ತನ್ನ ಏಕನಿಷ್ಠೆಯ ಪವಿತ್ರಾಂತಃಕರಣವನ್ನು ಬಿಚ್ಚು ಮನಸಿನಿಂದ ವ್ಯಕ್ತಪಡಿಸಿದಳು.

ಈಗ ಅವಳ ಬೆದರಿಕೆ ಚದುರಿತು. ಅವರೆದುರಿಗೆ ಮರಡಿಯು ವಾರಿ ಗೊಯ್ಯುವ ಕಡಿದಾದ ದಾರಿಯಿದೆ. ಮೋನಳ ಹೋರಿಯೂ ಅದೇ ದಾರಿ ಹಿಡಿದು ಸಮುದ್ರದಲ್ಲಿ ಜಿಗಿದಿತ್ತು. ಮತ್ತೆ ಇಬ್ಬರೂ ಕೈಯೊಳಗೆ ಕೈ ಹಾಕಿ ಮುಂದೆ ಹೊರಟರು. ಅವರ ಕಣ್ಣುಗಳು ನೀರಿನಿಂದ ತುಂಬಿ ತುಳು ಕುತ್ತಿದ್ದರೂ ಒಂದು ಬಗೆಯ ಶಾಂತವಾದ ಕಳೆಯು, ತೃಪ್ತ ಜೀವಿಗಳ ಸಂತುಷ್ಟ ಭಾವನೆಯು ಅವರ ಮುಖಗಳಲ್ಲಿ ಒಡೆದು ಕಾಣುತ್ತಿತ್ತು.

ತುಸು ಹೊತ್ತಿನಲ್ಲಿಯೇ ಸಮುದ್ರಕ್ಕೆ ಬಾಗಿದ ಮರಡಿಯ ಒಂದು ಬಂಡೆಗಲ್ಲಿನ ಮೇಲೆ ನಿಂತರು. ಸುಮಾರು ೭೦ ಫೂಟಿನ ಕೆಳಗೆ ಸಮು ದ್ರವು ನಾನಾ ತರದ ಸಮ್ಮಿಶ್ರರಾಗಗಳಿಂದ ಆಲಾಪನೆಯನ್ನು ನಡೆಸಿತ್ತು. ಜಗಚ್ಚಕ್ಷುವು ಅದೇ ಮೂಡಹತ್ತಿದ್ದಾನೆ; ಮೂಡಣ ದಿಕ್ಕು ಕೇಶರಿ ಬಣ್ಣದಿಂದ ರಂಜಿತವಾಗಿದೆ. ಎತ್ತ ನೋಡಿದರೂ ಅಫಾಟವಾದ ಸಮುದ್ರ ವೊಂದೇ ಅವರ ಕಣ್ಣಿಗೆ ಹೊಳೆಯುತ್ತಿತ್ತು.

'ಇದೇ ನಮ್ಮ ಸಂಗಮ ಸ್ಥಳವಲ್ಲವೆ ಓಸ್ಕಾರ್?'

'ಇದೇ..ಹೌದು. ಆ ನಮ್ಮ ಸ್ಥಳವು ಮೋನಾ.'

'ನಾವಿಬ್ಬರೂ ನಿಶ್ಚಯಿಸಿದಂತೆ ಒಂದಾಗೋಣವೆ?'

'ಓಹೋ! ಅದರಲ್ಲೇನು ಮೋನಾ, ಕೂಡೋಣ. ಬಾಳೋಣ!'

ಸ್ವ-ಪರ ಜನ ಸಮೂಹದಿಂದ ತ್ಯಜಿಸಲ್ಪಟ್ಟು, ಬದುಕು ಬಾಳಿನಲ್ಲಿ ಬೇರೆಯಾಗಿ, ಸಾವಿನಲ್ಲಿ ಸಮರಸವಾಗಿ ಸಾರೂಪ್ಯಸೌಖ್ಯವನ್ನನುಭವಿಸುವ ತರುಣ-ತರುಣಿಯು ತಮ್ಮ ಅಂತ್ಯವಿಧಿಯ ಕಾರ್ಯವನ್ನು (ಜೀವಂತ ಶ್ರಾದ್ಧವನ್ನು) ಸಾಂಗಗೊಳಿಸಲು ಸ್ವಾನಂದದಿಂದ ತಮ್ಮ ಷ್ಟಕ್ಕೆ ತಾವೇ ಸಿದ್ಧರಾಗಿ, ಸಮಯಕ್ಕಾಗಿ ಕಾದಿದ್ದಾರೆ.

ಓಸ್ಕಾರನು ತಾನು ತೊಟ್ಟುಕೊಂಡ ಕೋಟನ್ನು ತೆಗೆದು ಬಿಸುಟಿದನು. ಉದ್ದವಾದ ನಡಪಟ್ಟಿಯನ್ನು ಬಿಚ್ಚಿ, ಅದರಿಂದಲೇ ತಮ್ಮಿಬ್ಬರನ್ನು ಗಟ್ಟಿಯಾಗಿ ಬಿಗಿದುಕೊಂಡನು. ಈಗ ಅವರು ಕಣ್ಣಿಗೆ ಕಣ್ಣು ಹಚ್ಚಿ, ಹೃದಯಕ್ಕೆ ಹೃದಯ ಹೊಂದಿಸಿದರು. ಪ್ರಣಯಿಗಳ ಜೀವವೂ ಒಂದೇ ಇರುವಂತೆ, ದೇಹಗಳೂ ಎರಡಲ್ಲೆಂಬ ಭಾವನೆಯನ್ನು ಅಲ್ಲಗಳೆಯುವಂತೆ ಏಕಮೇವಾದ್ವಿತೀಯರಾಗಿ ನಿಂತಿದ್ದಾರೆ ಅವರು.

'ಈಗಲಾದರೂ ಆ ಸಮಯ ಬಂದಿತಲ್ಲವೇ ಓಸ್ಕಾರ್?'

'ಮೋನಾ, ಈಗ ಬಂದಿತು ನೋಡು' ಎಂದು ತನ್ನ ಕೈಗಳನ್ನು ಸಾವಕಾಶವಾಗಿ ಅವಳ ಸುತ್ತುಹಾಕಿ ಅವಳನ್ನು ನಿರ್ವಿಕಾರ ಚಿತ್ತನಾಗಿ ಮುದ್ದಿಸಿದನು. ಮೋನಳೂ ಓಸ್ಕಾರನನ್ನು ಅತ್ಯಂತ ಮಮತೆಯಿಂದ ಮುದ್ದಿಸಿದಳು. ಅದೆ ಅವರ ಮೊದಲನೆಯ ಮುದ್ದು ಕೊನೆಯದೂ ಆಯಿತು.

'ಓಸ್ಕಾರ್, ನೀನು ನನ್ನನ್ನು ಪ್ರೀತಿಸಿದುದಕ್ಕೆ ದೇವರು ನಿನ್ನನ್ನು ಆಶೀರ್ವದಿಸಲಿ.'

'ಮೋನಾ, ನಿನ್ನನ್ನು ಸಹ ದೇವರು ಆಶೀರ್ವದಿಸಲಿ. ಇನ್ನೇನು ಮಿಗಿಯಿತಲ್ಲವೇ?'

'ಇಲ್ಲ-ಇನ್ನೂ-ಇಲ್ಲ-ಅಲ್ಲಿಯವರೆಗೆ—'

'—ಅಲ್ಲಿಯವರೆಗೆ—ಒಂದಾಗೆವು—ಒಂದಾದೆವು' ಎಂಬ ಶಬ್ದವು ಹೊರ ಹೊರಡುವದರೊಳಗಾಗಿ ಡುಮುಕ್ ಎಂಬ ಸಪ್ಪಳವು ತೆರೆಗಳ ಕಡಕಡಾಟದಲ್ಲಿಯೂ ವಾತಾವರಣದಲ್ಲಿ ವ್ಯಾಪಿಸಿತು.

ಸೂರ್ಯದೇವನು ಕ್ಷಿತಿಜದ ಮೇಲೆ ಕಾಂತಿಯುತನಾಗಿ ವಿರಾಜಿಸುತ್ತಿದ್ದಾನೆ. ವಿಶಾಲವಾದ ಸಮುದ್ರವು ತನ್ನ ಕೊನೆಗಾಣದ ಹಾಡನ್ನು ಆರ್ಭಟೆಯ ಏಕತಾನದಿಂದ ಹಾಡುತ್ತಿದೆ. ಮರಡಿಯ ತುಟ್ಟ ತುದಿಯು ಮಾತ್ರ ಬರಿದಾಗಿ, ಏಕಾಕಿಯಾಗಿ ಸುತ್ತಲೂ ನೋಡುತ್ತ ನಿಂತಿದೆ.

ತುಸು ಹೊತ್ತಿನ ಮೇಲೆ, ನೀಲಿಬಣ್ಣದ ಆಕಾಶದಲ್ಲಿ ತೊಳಗುವ ಸೂರ್ಯನ ಪ್ರಕಾಶವು ನೀರಿನ ಮೇಲೆ ಕುಣಿದಾಡಹತ್ತಿತು. ನಿಶಾನೆಗಳಿಂದಲೇ ಅಲಂಕರಿಸಲ್ಪಟ್ಟ ದಕ್ಷಿಣ ದಿಕ್ಕಿನ ಭೂಶಿರದ ಮೇಲಿಂದ ಒಂದು ಹಡಗವು ಬರುತ್ತಲಿದೆ. ಅದು ಸೈನಿಕರಿಂದ ತುಂಬಿದೆ. ಉತ್ತರ ದಿಕ್ಕಿನ ಭೂಶಿರದಾಚೆಗಿರುವ ತಮ್ಮ ಹುಟ್ಟೂರನ್ನು ಮೊಟ್ಟಮೊದಲು ನೋಡಲು ಉತ್ಸುಕರಾಗಿ ಆ ಸೈನಿಕರೆಲ್ಲರೂ ತುದಿಗಾಲ ಮೇಲೆ ನಿಂತು ಕಣ್ತೆರೆದು ನಿಂತುಕೊಂಡಿದ್ದಾರೆ.

ಪೀಲ್ ಪಟ್ಟಣದ ಜೀವರಕ್ಷಿಸುವ ಹಡಗದ ಮನೆಯೊಳಗಿಂದ ಆಕಾಶಬಾಣದ ಸಪ್ಪಳವೊಂದು ಶಾಂತವಾದ ವಾತಾವರಣವನ್ನು ಭಂಗಗೊಳಿಸಿತು. ಕೂಡಲೆ ಹಡಗದ ಮೇಲೆ ಬ್ಯಾಂಡು ವಾದ್ಯವು ಮೊಳಗಹತ್ತಿತು. ಸೈನಿಕರು ಒಟ್ಟಾಗಿ ಉತ್ಸಾಹವೃತ್ತಿಯಲ್ಲಿ 'ಮನೆಯ ತುಂಬ ದೀಪ ಬೆಳಗುತಿರಲಿ! ಹೊರಗೆ ಹೋದ ಜನರು ಮರುಳುವನಕ !!' ಎಂದು ಹಾಡುತ್ತ ಕುಣಿಯತೊಡಗಿದರು.

ತುಸು ಹೊತ್ತಿನ ಮೇಲೆ ದೇವಾಲಯದ ಗಂಟೆಗಳು ಬಾರಿಸತೊಡಗಿದವು. ಪ್ರತಿ ಕ್ಷಣಕ್ಕೂ ನಾದವು ಹೆಚ್ಚಾಗುತ್ತಲೇ ಇತ್ತು. ಆನಂದದಾಯಕ ಸಂದೇಶವು ಮೇಘರಹಿತವಾದ ಆಕಾಶಕ್ಕೂ ಹಬ್ಬಿತೆನುವಂತೆ ಆ ಗಂಟೆಗಳ ನಾದವು 'ಶಾಂತಿ! ಶಾಂತಿ! ಶಾಂತಿ! ಎಂದು ಇಡಿಕಿರಿ ವಾತಾವರಣವನ್ನೆಲ್ಲ ದುಮುದುಮಿಸಿತು.

---